ಕಾಯಕವೇ ಕೈಲಾಸ



# ಸಿದ್ಧಗಂಗಾ



ಸಂಪುಟ : ೫೪ ಡಿಸೆಂಬರ್ ೨೦೧೮ ಸಂಚಿಕೆ : ೧೨



ನವೆಂಬರ್ ೧೭ ರಂದು ಶ್ರೀ ದೇಗುಲಮಠದಲ್ಲಿ ಏರ್ಪಡಿಸಿದ್ದ ಬಸವ ಜಯಂತಿ ಕಾರ್ಯಕ್ರಮವನ್ನು ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರ ದಿವ್ಯಸಾನ್ನಿಧ್ಯದಲ್ಲಿ ಶ್ರೀ ದೇಗುಲಮಠದ ಪೂಜ್ಯ ಶ್ರೀ ಶ್ರೀ ಮುಮ್ಮಡಿ ಮಹಾಸ್ವಾಮಿಗಳವರ ದಿವ್ಯಸಮ್ಮುಖದಲ್ಲಿ ಭಾರತೀಯ ಜನತಾಪಕ್ಷದ ರಾಜ್ಯಾಧ್ಯಕ್ಷರು ಹಾಗೂ ಮಾಜಿ ಮುಖ್ಯಮಂತ್ರಿಗಳು ಆದ ಶ್ರೀ ಬಿ.ಎಸ್. ಯಡಿಯೂರಪ್ಪನವರು ಉದ್ಘಾಟಿಸಿದರು. ಈ ಸಂದರ್ಭದಲ್ಲಿ ಹರಗುರು ಚರಮೂರ್ತಿಗಳು ಹಾಗೂ ಸಂಸದ ಶ್ರೀ ಡಿ.ಕೆ. ಸುರೇಶ್, ಶ್ರೀ ಬಿ.ಎಸ್. ಪರಮಶಿವಯ್ಯ ಮೊದಲಾದ ಗಣ್ಯರು ಉಪಸ್ಥಿತರಿದ್ದರು.



ಶ್ರೀ ದೇಗುಲಮಠದ ನಿರಂಜನ ಚರಪಟ್ಟಾಧಿಕಾರ ಮಹೋತ್ಸವದ ಧಾರ್ಮಿಕ ಸಮಾರಂಭವನ್ನು ಶ್ರೀ ಸುತ್ತೂರು ಜಗದ್ಗುರುಗಳು ಉದ್ಘಾಟಿಸಿದರು. ಈ ಸಂದರ್ಭದಲ್ಲಿ ಶ್ರೀ ಸಿದ್ಧಗಂಗಾ ಶ್ರೀಗಳು, ಶ್ರೀ ದೇಗುಲಮಠದ ಶ್ರೀಗಳು, ಹರಗುರು ಚರಮೂರ್ತಿಗಳು ಹಾಗೂ ಸಂಸದ ಶ್ರೀ ಡಿ.ಕೆ. ಸುರೇಶ್ ಮೊದಲಾದ ಗಣ್ಯರು ಉಪಸ್ಥಿತರಿದ್ದರು.



ಬೆಂಗಳೂರಿನ ಶ್ರೀ ಗುರುವಣ್ಣದೇವರ ಮಠದಲ್ಲಿ ನವೆಂಬರ್ ೨೩ ರಂದು ಏರ್ಪಡಿಸಿದ್ದ ಸಮಾರಂಭದಲ್ಲಿ 'ಶಿವಾನುಭವಶಾಸ್ತ್ರ' ಗ್ರಂಥವನ್ನು ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ಲೋಕಾರ್ಪಣೆ ಮಾಡಿದರು. ಈ ಸಂದರ್ಭದಲ್ಲಿ ಪೂಜ್ಯ ಶ್ರೀ ಶ್ರೀ ನಂಜುಂಡ ಮಹಾಸ್ವಾಮಿಗಳು, ಬೆಟ್ಟಹಳ್ಳಿಮಠದ ಶ್ರೀಗಳು, ಪೂಜ್ಯ ಮಹಾಪೌರರಾದ ಶ್ರೀಮತಿ ಗಂಗಾಂಬಿಕೆ ಮಲ್ಲಿಕಾರ್ಜುನರವರು ಉಪಸ್ಥಿತರಿದ್ದರು.




## ಅಂತರಂಗ



॥ ಓಂ ಶ್ರೀ ಗುರುಬಸವಲಿಂಗಾಯ ನಮಃ ॥
ಆವಾವ ಕಾಯಕವ ಮಾಡಿದರು ಬಸವೇಶ
ಆವಗಂ ಶರಣರನು ಸೇವಿಪೆನು ಬಸವೇಶ



# ಸಿದ್ಧಗಂಗಾ

ಸಂಪುಟ : ೫೪ ಡಿಸೆಂಬರ್ ೨೦೧೮ ಸಂಚಿಕೆ : ೧೨


ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು
ಸಂಸ್ಥಾಪಕ ಅಧ್ಯಕ್ಷರು

ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳು
ಉಪಾಧ್ಯಕ್ಷರು

ಸಂಪಾದಕರು :
ಹೆಚ್.ವಿ. ವೀರಭದ್ರಯ್ಯ
ಸಹ ಸಂಪಾದಕರು :
ಎಚ್.ಎಸ್. ಸಿದ್ಧಗಂಗಪ್ಪ

ಪತ್ರಿಕಾ ನಿರ್ವಹಣಾ ಸಮಿತಿ :
ಎಂ. ರೇಣುಕಾರಾಧ್ಯ
ಆರ್.ಎಸ್. ಮಲ್ಲೇಶಪ್ಪ
ಕೆ.ಬಿ. ಶಿವಶಂಕರಯ್ಯ

ಪ್ರಕಾಶನ :
ಹಳೆಯ ವಿದ್ಯಾರ್ಥಿಗಳ ಸಂಘ
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ-೫೭೨ ೧೦೪.

ಮುದ್ರಕರು :
ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಆಫ್‌ಸೆಟ್
ಮುದ್ರಣಾಲಯ, ಶ್ರೀ ಸಿದ್ಧಗಂಗಾ ಮಠ,
ತುಮಕೂರು-೫೭೨ ೧೦೪.

ವಿಳಾಸ :
"ಸಂಪಾದಕರು"
'ಸಿದ್ಧಗಂಗಾ' ಮಾಸಪತ್ರಿಕೆ
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ-೫೭೨ ೧೦೪
ದೂ: ೦೮೧೬-೨೨೮೨೩೨೨.


## ಒಳಪುಟಗಳಲ್ಲಿ ..................


೨. ಸಂಪಾದಕೀಯ
೩. ಶ್ರೀವಾಣಿ
೪. ಸಿದ್ಧಲಿಂಗೇಶ್ವರ ವಚನ – ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ
೫. ಹಳೆಯ ವಿದ್ಯಾರ್ಥಿಗಳ ಹಾಗೂ ಹಿತೈಷಿಗಳ ಸಂಘದ ಸರ್ವಸದಸ್ಯರ ಮಹಾಧಿವೇಶನದ ಆಹ್ವಾನಪತ್ರಿಕೆ
೭. ಭೂಮಾಚಿಂತನ – ಶ್ರೀ ಸಿದ್ಧೇಶ್ವರ ಸ್ವಾಮಿಗಳು
೧೧. ಮಣ್ಣನ್ನು ಹೊನ್ನಾಗಿಸಿದ ತಪೋಮೂರ್ತಿ – ಬಿ.ಎಂ. ಪರಮೇಶ್ವರಪ್ಪ
೧೩. ಅನುಭಾವಿ ಕವಿ ನಿಜಗುಣ ಶಿವಯೋಗಿಗಳು – ಎಚ್.ಎಸ್. ಸಿದ್ಧಗಂಗಪ್ಪ
೧೯. ಲಿಂಗಪೂಜಾಲೀಲಾ ವಿನೋದ ಪರಮಪೂಜ್ಯರು – ಡಿ.ಬಿ. ಮೃತ್ಯುಂಜಯಪ್ಪ (ಜಯಣ್ಣ)
೨೨. ಚಿನ್ಮಯ ಜ್ಞಾನಿ ಚೆನ್ನಬಸವಣ್ಣನವರು – ಯೋಗೀಶ್ ನಿರ್ವಿಕಲ್ಪ
೨೫. ಬದುಕಿನ ಅರ್ಥ – ಒಂದು ಚಿಂತನೆ – ಸ.ರಾ. ಸುಳಕೂಡೆ
೨೭. ಶರಣಾಂಜಲಿ – ಶ್ರೀ ಹೆಚ್.ಬಿ. ಗಂಗಾಧರಯ್ಯನವರು
೨೮. ಕ್ಷೇತ್ರವಾರ್ತೆ ವರದಿ: ಎಸ್. ಶಿವಕುಮಾರ್
೩೧. 'ಶಿವಾನುಭವಶಾಸ್ತ್ರ' ಗ್ರಂಥ ಲೋಕಾರ್ಪಣೆ – ವರದಿ
೩೨. ಶ್ರೀ ಸಿದ್ಧಗಂಗಾ ಗುರುಕುಲ ಡೆವಲಪ್‌ಮೆಂಟ್ ಟ್ರಸ್ಟ್‌ಗೆ ದೇಣಿಗೆ ನೀಡಿದ ದಾನಿಗಳು



ಚಂದಾ ವಿವರ : ವಾರ್ಷಿಕ ಚಂದಾ ರೂ. 200/-
ಆಜೀವ ಸದಸ್ಯತ್ವ ರೂ. 1500/- ಬಿಡಿ ಪ್ರತಿ ರೂ. 20.00





# ಸಂಪಾದಕೀಯ........

ಈ ತಿಂಗಳಿನ ಡಿಸೆಂಬರ್ ೨೦೧೮ಕ್ಕೆ ಸಂಚಿಕೆ ೧೨ ಮುಕ್ತಾಯವಾಗುತ್ತದೆ. ೫೪ ವರ್ಷಗಳನ್ನು ದಾಟಿ ೫೫ನೇ ವರ್ಷದತ್ತ ಮುನ್ನಡೆಯುತ್ತಿದೆ. ಅರ್ಧ ಶತಮಾನಕ್ಕಿಂತಲೂ ಹೆಚ್ಚು ಸೇವಾಪಥದಲ್ಲಿ ನಡೆದುಬಂದಿದೆ. 'ಸಿದ್ಧಗಂಗಾ' ಮುನ್ನಡೆಯಲು ಆಶೀರ್ವದಿಸುತ್ತಿರುವ ಶ್ರೀಮಠದ 'ಪ್ರಾಣಜೀವಾಳ' ಕರ್ನಾಟಕರತ್ನ, ಪದ್ಮಭೂಷಣ, ರಾಷ್ಟ್ರೀಯ ಬಸವಶ್ರೀ ಪ್ರಶಸ್ತಿ ಪುರಸ್ಕೃತ ತ್ರಿವಿಧದಾಸೋಹಮೂರ್ತಿ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರಮಹಾ ಸ್ವಾಮಿಗಳವರ ಹಾಗೂ ಶ್ರೀಮಠದ ಅಧ್ಯಕ್ಷರಾಗಿರುವ ಜ್ಞಾನಘನಸಿರಿ, ಅಸ್ಖಲಿತನುಡಿಪೂಜ್ಯ, ಬಹುಶ್ರುತ, ತ್ರಿಭಾಷಾರತ್ನ, ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರ ಪ್ರೇಮಪೂರ್ಣ ಆಶೀರ್ವಾದ ಹಾಗೂ ಉತ್ತೇಜನವೇ ಶ್ರೀರಕ್ಷೆಯಾಗಿದೆ.

ಪತ್ರಿಕೆ ಆರಂಭವಾದ ದಿನದಿಂದ ಸಂಪಾದಕರಾಗಿ, ಸಹ-ಸಂಪಾದಕರಾಗಿ, ಪ್ರಕಾಶಕರಾಗಿ, ಪ್ರಚಾರಕರಾಗಿ, ಕಾರ್ಯಾಲಯದ ಬಂಧುಗಳಾಗಿ, ಪತ್ರಿಕೆಯ ಚಂದಾದಾರರಾಗಿ, ಆಜೀವ ಸದಸ್ಯರಾಗಿ, ಹಳೆಯ ವಿದ್ಯಾರ್ಥಿಗಳ ಹಾಗೂ ಹಿತೈಷಿಗಳ ಸಂಘದ ಪ್ರಧಾನ ಕಾರ್ಯದರ್ಶಿಗಳಾದ ಡಾ. ಎಂ.ಎನ್. ಚನ್ನಬಸಪ್ಪ, ಕಾರ್ಯದರ್ಶಿಗಳಾದ ನಗುಮುಖದ ಕ್ರಿಯಾಶೀಲ ಆತ್ಮೀಯರಾದ ಶ್ರೀ ಕೆ.ಹೆಚ್. ಶಿವರುದ್ರಯ್ಯನವರು, ಪ್ರಕಾಶರಾಗಿ ಬಹುದಿನಗಳ ಸೇವೆ ಮಾಡಿದ ಇತ್ತೀಚೆಗೆ ಲಿಂಗೈಕ್ಯರಾದ ಶ್ರೀ ಹೆಚ್.ಬಿ. ಗಂಗಾಧರಯ್ಯನವರು, ಶ್ರೀಮಠದ ಮುದ್ರಣಾಲಯದ ಶ್ರೀ ಪ್ರಕಾಶ್, ಆಡಳಿತ ಕಾರ್ಯಾಲಯದ ಆತ್ಮೀಯರು, ಅಭಿಮಾನಿಗಳಾಗಿ ನಿರ್ವಹಣ ಸಮಿತಿಯ ಶ್ರೀ ಎಂ. ರೇಣುಕಾರಾಧ್ಯರು, ಶ್ರೀ ಆರ್.ಎಸ್. ಮಲ್ಲೇಶಪ್ಪನವರು, ಶ್ರೀ ಕೆ.ಬಿ. ಶಿವಶಂಕರ್ ಅವರು ಸ್ಮರಣೀಯರಾಗಿದ್ದಾರೆ. ಪತ್ರಿಕಾ ಕ್ಷೇತ್ರದಲ್ಲಿ ಅಪಾರ ಅನುಭವವನ್ನು ಹೊಂದಿರುವ, ಕಳೆದ ಅನೇಕ ವರ್ಷಗಳಿಂದ ಸಹ ಸಂಪಾದಕರಾಗಿ ಶ್ರದ್ಧೆ, ನಿಷ್ಠೆಯಿಂದ ಸೇವೆ ಸಲ್ಲಿಸುತ್ತಿರುವ ಆತ್ಮೀಯ ಬಂಧು ಶ್ರೀ ಎಚ್.ಎಸ್. ಸಿದ್ಧಗಂಗಪ್ಪನವರು ಪತ್ರಿಕೆಯನ್ನು ಸಕಾಲಕ್ಕೆ ಬರುವಂತೆ ಮಾಡುತ್ತಿರುವ ಅವರ ಅನುಪಮ ಸೇವೆ ಸ್ಮರಣೀಯವಾದುದು. ಕಳೆದ ಅನೇಕ ವರ್ಷಗಳಿಂದ ಆಕರ್ಷಕವಾಗಿ ಮುದ್ರಣ ಮಾಡಿಕೊಡುತ್ತಿರುವ ಬೆಂಗಳೂರಿನ ಶ್ರೀ ಗೀತಾಂಜಲಿ ಗ್ರಾಫಿಕ್ಸ್‌ನ ಮಾಲೀಕರು ಹಾಗೂ ಶ್ರೀಮಠದ ಸದ್ಭಕ್ತರು ಆದ ಶ್ರೀ ನಾಗಸುಂದರ್‌ರವರನ್ನು ನೆನೆಯುತ್ತೇನೆ. 'ಸಿದ್ಧಗಂಗಾ'ದ ಎಲ್ಲರನ್ನೂ ವಂದಿಸುತ್ತೇನೆ.

ನವೆಂಬರ್ ತಿಂಗಳಲ್ಲಿ ಕೇಂದ್ರ ಸಚಿವರಾದ ಶ್ರೀ ಅನಂತಕುಮಾರ್, ಪ್ರಸಿದ್ಧ ಚಲನಚಿತ್ರ ನಟರು ಹಾಗೂ ಮಾಜಿ ಸಚಿವರೂ ಆದ ಶ್ರೀ ಅಂಬರೀಶ್, ಕೇಂದ್ರ ಮಾಜಿ ಸಚಿವರಾದ ಶ್ರೀ ಸಿ.ಕೆ. ಜಾಫರ್ ಷರೀಫ್ ಅವರು ವಿಧಿವಶರಾದರೆಂದು ತಿಳಿಸಲು ಸಿದ್ಧಗಂಗಾ ವಿಷಾದಿಸುತ್ತದೆ. ಸಿದ್ಧಗಂಗಾ ಗುರುಪರಂಪರೆ ಅವರ ಆತ್ಮಕ್ಕೆ ಚಿರಶಾಂತಿಯನ್ನು ನೀಡಲಿ ಎಂದು ಪ್ರಾರ್ಥಿಸುತ್ತದೆ.

**ಪ್ರೊ. ಹೆಚ್.ವಿ. ವೀರಭದ್ರಯ್ಯ**
ಸಂಪಾದಕರು





# ಶ್ರೀವಾಣಿ

## ಋಣತತ್ತ್ವ

'ಭಾರತೀಯ ಸಂಸ್ಕೃತಿಯಲ್ಲಿ ಋಣತತ್ತ್ವ ಅರ್ಥಪೂರ್ಣವಾದುದು. ಸಮಾಜಕ್ಕಾಗಿ ದುಡಿದವರನ್ನು ಗೌರವಿಸುವುದು ಸತ್ಸಂಪ್ರದಾಯವಾದುದಾಗಿದೆ. ವ್ಯಕ್ತಿತ ಜೀವನ ಅನೇಕ ಕೃಪಾಶಕ್ತಿಗಳಿಂದ ಸ್ನೇಹಮಯ ಚೇತನಗಳಿಂದ ಸೇವಾತ್ಮಕ ಸದ್ಭಾವಿಗಳಿಂದ ಸಹಾಯ ಸಹಕಾರಪೂರ್ಣ ಮನಸ್ಸುಗಳಿಂದ ಪರಿಚಯ ವಿಶೇಷಗಳಿಂದ ಸಂವರ್ಧಿಸುತ್ತ ನಡೆಯುತ್ತದೆ. ಪರಿಸರ ಪ್ರಭಾವಗಳಿಂದ ಅರಳುತ್ತದೆ. ಸ್ವಂತ ಶ್ರಮಸಾಧನೆಗಳಿಂದ ಪರಿಮಳಿಸುತ್ತದೆ. ತನ್ನಂತೆ ಪರರೆಂದು ಭಾವನೆ ಬೆಳೆದಾಗ ಎತ್ತರಕ್ಕೇರುತ್ತದೆ. ಲಭ್ಯವಾದ ಅವಕಾಶಗಳನ್ನು ಸದುಪಯೋಗಪಡಿಸಿಕೊಂಡಾಗ ಗಣನೀಯವೆನಿಸುತ್ತದೆ, ಮಾನ್ಯವಾಗುತ್ತದೆ. ಸ್ನೇಹ, ಸೌಜನ್ಯ, ಸೇವಾ ವೃತ್ತಿ ಪರವಾದಾಗ ಅಂತರ್ಮುಖಿಯಾದಾಗ ಬಾಳಿನಗುರಿಯನ್ನು ಗುರುತಿಸುತ್ತದೆ. ಗುರಿಯತ್ತ, ಜ್ಞಾನಘನದತ್ತ ಹೆಜ್ಜೆ ಹಾಕುತ್ತದೆ. ಸಮಾಜರೂಪಿ ಜಂಗಮದ ದಾಸೋಹದಲ್ಲಿ ನಿರಂತರವಾಗಿ ಆನಂದವನ್ನನುಭವಿಸುವ ಸುಸಂಸ್ಕೃತ ಜೀವರತ್ನವೆನಿಸುತ್ತದೆ.

ಕವಿವಾಣಿ ಹೇಳುವಂತೆ –

ಋಣವ ತೀರಿಸಬೇಕು ಋಣವ ತೀರಿಸಬೇಕು
ಋಣವ ತೀರಿಸುವ ಜಗದಾದಿ ಸತ್ವವನು
ಮನದಿ ಕಾಣುತ್ತದರೊಳ್ ಒಂದುಗೂಡಲು ಬೇಕು
ಮನೆಯೊಳಗೆ ಮಠ ನಿನಗೆ ಮಂಕುತಿಮ್ಮ ॥

ಎನ್ನುವುದರ ಜೊತೆಗೆ

ಎನಿತು ಜನ್ಮದಲಿ ಎನಿತು ಜೀವರಿಗೆ
ಎನಿತು ಋಣಿಯೋ ನಾವು
ತಿಳಿದು ನೋಡಿದರೆ ಬಾಳು ಎಂಬುದಿರು
ಋಣದ ರತ್ನಗಣಿಯೋ ॥

– ರಾಷ್ಟ್ರಕವಿ ಡಾ. ಜಿ.ಎಸ್. ಶಿವರುದ್ರಪ್ಪ

ಎಂಬುದನ್ನು ಅರಿತು ಬಾಳುವುದಾಗಬೇಕು.

## ವಚನ-ತ್ರಿವಿಧಿ

### ಶ್ರೀ ಸಿದ್ಧಲಿಂಗೇಶ್ವರ ವಚನ



**ಗುರುವಿನಿಂದುಪದೇಶವ ಪಡದ ಶಿಷ್ಯಂಗೆ**
**ಭಾವವಾವುದಯ್ಯಾ ಎಂದಡೆ,**
**ಸದ್ಗುರು ಸಂದರೆ ಲಿಂಗದಲ್ಲಿಯೆ ಐಕ್ಯವಾದರೆಂದು**
**ಭಾವಿಸುವುದಯ್ಯಾ**
**ಲೋಕದವರಂತೆ ಸತ್ತರು ಕೆಟ್ಟರು ಎಂದು**
**ಬರಿ ದುರ್ನುಡಿಯ ನುಡಿದರೆ ಅಘೋರ ನರಕ**
**ತಪ್ಪದು ಕಾಣಾ**
**ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ ॥**

ಗುರುವಿನುಂದುಪದೇಶವ ಪಡೆದ – ಶ್ರೀ ಗುರುನಾಥನ ವೇದ ಮಂತ್ರ ಕ್ರಿಯೆಗಳೆಂಬ ದೀಕ್ಷತ್ರಯಗಳಿಂದ ಅಂಗಕ್ಕೆ ಲಿಂಗೋಪದೇಶ, ಮನಕ್ಕೆ ಮಂತ್ರೋಪದೇಶವನು ಪಡೆದ, ಶಿಷ್ಯಂಗೆ – ಶಿಷ್ಯೋತ್ತಮನಿಗೆ, ಭಾವವಾವುದಯ್ಯಾ – ಶಿವಭಾವವಾವುದಯ್ಯಾ ಸ್ವಾಮಿ ಎಂದರೆ, ಸದ್ಗುರು ಸಂದರೆ – ಶ್ರೀ ಗುರುನಾಥನು ಐಕ್ಯವಾದರೆ, ಲಿಂಗದಲ್ಲಿ – ಮಹಾಲಿಂಗದಲ್ಲಿ, ಐಕ್ಯವಾದರೆಂದು – ಸಮರಸೈಕ್ಯವಾದರೆಂದು, ಭಾವಿಸುವುದಯ್ಯಾ – ಹೀಗೆಂದರಿವುದಯ್ಯಾ, ಲೋಕದವರಂತೆ – ಲೋಕದ ಆತ್ಮರುಗಳ ಹಾಂಗೆ, ಸತ್ತರು ಕೆಟ್ಟರು ಎಂದು; ಸತ್ತರು – ಮೃತವಾದರು, ಕೆಟ್ಟರು – ನಾಶವಾದರು, ಎಂದು – ಹೀಗೆಂದು, ಬರಿಯ ದುರ್ನುಡಿಯ – ಬರಿಯ ನೀಚ ಪ್ರಸಂಗವನು, ನುಡಿದರೆ – ಹೇಳಿದರೆ, ಅಘೋರ ನರಕ – ಭಯಂಕರವಾದ ನಿರಯವು, ತಪ್ಪದು – ವಾರ್‍ಯಾಗದು, ಕಾಣಾ –

(ಕೃಪೆ: ತೋಂಟದಾರ್ಯ ವಚನ ವ್ಯಾಖ್ಯೆ- ಸಂಪಾದಕರು- ಡಾ॥ ಸಾ.ಶಿ. ಮರುಳಯ್ಯ, ಪ್ರಕಾಶಕರು, ಶ್ರೀ ತೋಂಟದ ಸಿದ್ಧಲಿಂಗೇಶ್ವರ ಕೈಂಕರ್ಯ (ದಾಸೋಹ) ಸೇವಾ ಸಂಘ (ರಿ.) ಎಡೆಯೂರು-ಕುಣಿಗಲ್ ತಾಲ್ಲೂಕು, ತುಮಕೂರು ಜಿಲ್ಲೆ)

### ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

ಮುಂಜಾನೆ ಮುಂಬೆಳಗು ಕಣ್ಣು ತೆರೆಯುವಮುನ್ನ
ಲಿಂಗಪೂಜೆಗೆ ನಡೆವೆ ಶ್ರೀಗುರುವೆ । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಬಸವ ಸಂದೇಶವ ಬಿತ್ತುತ ನಡೆದಿರುವೆ
ಹಸನು ಮಾಡುತ ಜಗದ ಜೀವನವ । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನಿತ್ಯದಾಸೋಹವ ನಡೆದಲ್ಲಿ ನಡೆಸಿರುವೆ
ಸತ್ಯಶರಣರ ಹಾದಿ ತುಳಿದಿರುವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಸಿದ್ಧಿಯ ಶ್ರೀ ಫಲವು ಇದ್ದಲ್ಲಿ ಬರದೆಂದೆ
ಶ್ರದ್ಧೆ ಸಾಧನೆಯಿಂದ ದುಡಿಯೆಂದೆ । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಮಾತು ಜ್ಯೋತಿಯಾಗಿ ಮನವು ದೀಪ್ತಿಯಾಗಿ
ಓಡು ಪ್ರೀತಿಯಿಂದ ಹರಸಿದೆ । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನೀನು ಮೆಟ್ಟಿದ ಧರೆ ಪರಮಪಾವನತಂದೆ
ನೀನಾಡಿದ ಮಾತು ಶಿವಮಂತ್ರ । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನೀನು ಮಾಡುವ ನಿದ್ರೆ ದೈವದ ನಿಜಮುದ್ರೆ
ನೀನು ನೋಡುವ ನೋಟ ಶಿವನೋಟ । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನೀನು ಕಡೆಯುವ ಶಿಲ್ಪ ಶಿವಶಿಲ್ಪವಾದವು
ನೀನು ಹರಸಿದ ಶಿಲ್ಪ ಜಯಶುಭವು । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಸೇವೆಯಲಿ ಶಿವಪೂಜೆ ಕಾದು ಹಣ್ಣಾದಾಗ
ಭಾವದಲಿ ಶಿವಯೋಗ ನಡೆಸಿದೆ । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಮಗುವಿನ ನುಡಿಯಲ್ಲಿ ನಡೆಯಲ್ಲಿ ಶಿವನಿಹನು
ಜಗವ ತುಂಬಿಹನು ಮಗುವಾಗಿ । ತಾನೆಂದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

**ಪ್ರೊ. ಹೆಚ್.ವಿ. ವೀರಭದ್ರಯ್ಯ**



## ಆಹ್ವಾನ ಪತ್ರಿಕೆ

ಸ್ಥಾಪನೆ :1954 ದೂರವಾಣಿ : 0816-2283456

# ಹಳೆಯ ವಿದ್ಯಾರ್ಥಿಗಳ ಹಾಗೂ ಹಿತೈಷಿಗಳ ಸಂಘ

ಶ್ರೀ ಸಿದ್ಧಗಂಗಾ ಮಠ, ತುಮಕೂರು ಜಿಲ್ಲೆ- ೫೭೨ ೧೦೪.



## ಸರ್ವಸದಸ್ಯರ ಮಹಾಧಿವೇಶನದ

## ಆಹ್ವಾನ ಪತ್ರಿಕೆ



ಆತ್ಮೀಯರೆ,

ನಮ್ಮ ಸಂಘದ ೬೪ನೇ ವಾರ್ಷಿಕ ಮಹಾಧಿವೇಶನವನ್ನು ದಿನಾಂಕ ೨೩-೧೨-೨೦೧೮ ರಂದು ಭಾನುವಾರ ಬೆಳಿಗ್ಗೆ ೧೦.೦೦ ಗಂಟೆಗೆ ಸರಿಯಾಗಿ ಶ್ರೀಮಠದ **'ಶ್ರೀ ಗೋಸಲ ಸಿದ್ಧೇಶ್ವರ ವೇದಿಕೆ'** ಯ ಮುಂಭಾಗದಲ್ಲಿ ನಮ್ಮ ಸಂಘದ ಸಂಸ್ಥಾಪಕರಾದ ಪದ್ಮಭೂಷಣ, ಕರ್ನಾಟಕರತ್ನ, ಬಸವಶ್ರೀ ಪುರಸ್ಕೃತರಾದ ಶ್ರೀ.ಮ.ನಿ.ಪ್ರ.ಸ್ವ. ಪರಮಪೂಜ್ಯ ಡಾ॥ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ದಿವ್ಯಸಾನ್ನಿಧ್ಯದಲ್ಲಿ ಹಾಗೂ ಶ್ರೀ ಕ್ಷೇತ್ರದ ಅಧ್ಯಕ್ಷರಾದ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರ ದಿವ್ಯ ಉಪಸ್ಥಿತಿಯೊಂದಿಗೆ ಆಯೋಜಿಸಲಾಗಿದೆ. ತಾವು ಅಂದಿನ ಮಹಾಸಭೆಗೆ ತಮ್ಮ ಮಿತ್ರರುಗಳೊಂದಿಗೆ ತಪ್ಪದೇ ಆಗಮಿಸಿ ತಮ್ಮ ಅಮೂಲ್ಯವಾದ ಸಲಹೆಗಳನ್ನು ನೀಡಿ ಅಧಿವೇಶನವನ್ನು ಯಶಸ್ವಿಗೊಳಿಸಬೇಕೆಂದು ವಿನಂತಿಸಿ ಕೊಳ್ಳುತ್ತೇವೆ. ಅಂತೆಯೇ ತಮ್ಮ ವಿಳಾಸದಲ್ಲಿ ಬದಲಾವಣೆಯಾದಲ್ಲಿ ತಮ್ಮ ಹೊಸ ವಿಳಾಸ ಹಾಗೂ ಮೊಬೈಲ್ ಸಂಖ್ಯೆಯನ್ನು ತಮ್ಮ ಎಲ್‌ಎಂ ಸಂಖ್ಯೆಯೊಂದಿಗೆ ಸಂಘಕ್ಕೆ ತಪ್ಪದೇ ತಿಳಿಸಲು ವಿನಂತಿಸುತ್ತೇವೆ.

### : ಕಾರ್ಯಕ್ರಮ :

೧. ಶ್ರೀಮಠದ ನೈರ್ಮಲ್ಯ ಪ್ರಗತಿಯ ಬಗ್ಗೆ ಸಮಾಲೋಚಿಸುವುದು.
೨. ಪರಮಪೂಜ್ಯ ಶ್ರೀ ಶ್ರೀಗಳವರ ಆದೇಶದ ಮೇರೆಗೆ ಕೆಲವು ಪ್ರಶಸ್ತಿಗಳನ್ನು ಸರ್ವಸದಸ್ಯರ ಸಭೆಯಲ್ಲಿ ಸಾಧಕರಿಗೆ ಪ್ರದಾನ ಮಾಡಲಾಗುವುದು.
೩. ಶ್ರೀಕ್ಷೇತ್ರದ ನೈರ್ಮಲ್ಯವನ್ನು ಸುಧಾರಿಸಲು ನಿಧಿಸಂಗ್ರಹಣೆಯ ಬಗ್ಗೆ ಸದಸ್ಯರ ಸಹಕಾರವನ್ನು ಕೋರುವುದು.
೪. ಶ್ರೀಮಠದ ಪ್ರೌಢಶಾಲೆಗಳಲ್ಲಿ ೨೦೧೭-೧೮ಸಾಲಿನಲ್ಲಿ ಓದುತ್ತಿದ್ದು ಎಸ್‌ಎಸ್‌ಎಲ್‌ಸಿ ಪರೀಕ್ಷೆಯಲ್ಲಿ ಉತ್ತಮ ಶ್ರೇಣಿಯಲ್ಲಿ ಉತ್ತೀರ್ಣರಾದ ಒಬ್ಬರಿಗೆ ವಿದ್ಯಾರ್ಥಿವೇತನ ನೀಡುವುದು.

ಇನ್ನೂ ಇತರೆ ವಿಷಯಗಳ ಬಗ್ಗೆ ಚರ್ಚಿಸುವುದು.







## ಮನವಿ ಪತ್ರ

ಸಹೃದಯರೇ, ಬಂಧುಗಳೇ,

ನಮ್ಮ ಸಂಘವು ೧೯೫೪ರಲ್ಲಿ ಸ್ಥಾಪನೆಯಾದಾಗಿನಿಂದ ಅನೇಕ ಯೋಜನೆಗಳನ್ನು ಹಮ್ಮಿಕೊಂಡು ತಮ್ಮ ಸಹಕಾರದಿಂದ ಕಾರ್ಯರೂಪಕ್ಕೆ ತರಲಾಗಿದೆ ಎಂಬ ಅಂಶವನ್ನು ಕೃತಜ್ಞತಾಪೂರ್ವಕವಾಗಿ ಸ್ಮರಿಸಿಕೊಳ್ಳುತ್ತೇವೆ. ಈಗ ಪ್ರಮುಖವಾಗಿ ಶ್ರೀಮಠದ ನಿರಂತರ ನೀರು ಸರಬರಾಜು, ಶ್ರೀಮಠದಲ್ಲಿರುವ ಸಾರ್ವಜನಿಕ ಶೌಚಾಲಯಗಳ ನಿರ್ವಹಣೆ ಹಾಗೂ ಶ್ರೀಮಠದ ಪರಿಸರವನ್ನು ಸ್ವಚ್ಛಗೊಳಿಸುವ ಯೋಜನೆಯನ್ನು ಕಳೆದ ೧೧ ವರ್ಷಗಳಿಂದ ಹಳೆಯ ವಿದ್ಯಾರ್ಥಿಗಳ ಹಾಗೂ ಹಿತೈಷಿಗಳ ಸಂಘವು ನಿರ್ವಹಿಸುತ್ತಿದೆ. ಈ ಯೋಜನೆ ಯಶಸ್ವಿಯಾಗಲು ಕನಿಷ್ಟ ೭ ಕೋಟಿ ರೂಗಳನ್ನಾದರು ಸಂಗ್ರಹಿಸಿ ಆ ನಿಧಿಯನ್ನು ನಿಶ್ಚಿತ ಠೇವಣಿಯಲ್ಲಿ ತೊಡಗಿಸಿ ಅದರಿಂದ ಬರುವ ಬಡ್ಡಿ ಹಣದಿಂದ ಈ ಯೋಜನೆಯನ್ನು ಪೂರ್ಣಗೊಳಿಸಬೇಕಿದೆ. ನಮ್ಮ ಮನವಿಗೆ ಸ್ಪಂದಿಸಿ ಹಳೆಯ ವಿದ್ಯಾರ್ಥಿಗಳು, ಹಿತೈಷಿಗಳು, ಶ್ರೀಮಠದ ಸದ್ಭಕ್ತರು ಉದಾರವಾಗಿ ಧನಸಹಾಯ ಮಾಡುತ್ತಿದ್ದಾರೆ. ಇದುವರೆಗೆ ೩.೪೦ ಕೋಟಿ ರೂಗಳು ಸಂಗ್ರಹವಾಗಿದೆ ಎಂಬ ಅಂಶವನ್ನು ತಿಳಿಸಲು ಸಂತೋಷಿಸುತ್ತೇವೆ. ಈ ಹಣದಿಂದ ಬರುತ್ತಿರುವ ಬಡ್ಡಿಯಿಂದ ಮೊದಲ ಆದ್ಯತೆಯಾಗಿ ಶ್ರೀಮಠದ ಆವರಣದಲ್ಲಿರುವ ೫ ಶೌಚಾಲಯ ಮತ್ತು ಸ್ನಾನಗೃಹಗಳ ಸಂಕೀರ್ಣದ ಸ್ವಚ್ಛತಾ ಕಾರ್ಯವನ್ನು ಹೊರಗುತ್ತಿಗೆ ಆಧಾರದ ಮೇರೆಗೆ ವಹಿಸಲಾಗಿದೆ. ಸ್ವಚ್ಛತೆಯು ತೃಪ್ತಿಕರವಾಗಿದೆ ಎಂದು ಸಾರ್ವಜನಿಕರ ಅಭಿಪ್ರಾಯವಾಗಿದೆ.

ಪರಮಪೂಜ್ಯರು ಹೊತ್ತಿರುವ ಹತ್ತು ಹಲವು ಮುಖಗಳ ಸೇವಾಭಾರದಲ್ಲಿ ಅಣುಮಾತ್ರವನ್ನಾದರೂ ಹೊರುವ ಸದುದ್ದೇಶದ ಸಂಕಲ್ಪದೊಂದಿಗೆ ತಾವು ಸುದೀರ್ಘವಾಗಿ ಆಲೋಚಿಸಿ ಈ ಮೇಲಿನ ಯೋಜನೆಯನ್ನು ಕಾರ್ಯರೂಪಕ್ಕೆ ತರುವುದು ನಮ್ಮ ಆದ್ಯ ಕರ್ತವ್ಯವಾಗಿದೆ. ಆದ್ದರಿಂದ ತಾವು ಕನಿಷ್ಟ ೨೦೦೦/- ರೂಗಳಿಗೆ ಕಡಿಮೆ ಇಲ್ಲದಂತೆ ತಪ್ಪದೆ ದೇಣಿಗೆ ನೀಡುವುದರ ಮೂಲಕ ಈ ಯೋಜನೆ ಫಲಕಾರಿಯಾಗುತ್ತದೆ. ಈ ಅಂಶವನ್ನು ಪತ್ರಗಳ ಮೂಲಕ ನಿವೇದಿಸಿಕೊಳ್ಳಲಾಗಿದೆ. ತಾವು ಕಾಯಾ-ವಾಚಾ-ಮನಸಾ ಈ ಯೋಜನೆಗೆ ಕೈಜೋಡಿಸುತ್ತೀರೆಂದು ವಿನಂತಿಸಿಕೊಳ್ಳುತ್ತೇವೆ.

ಇತ್ತೀಚೆಗೆ ಬ್ಯಾಂಕಿನ ಬಡ್ಡಿದರವು ಗಣನೀಯವಾಗಿ ಇಳಿಮುಖವಾಗಿದೆ. ಶೇ. ೧೦.೫ ಇದ್ದದ್ದು ಈಗ ಶೇ.೭.೫ಕ್ಕೆ ಇಳಿಕೆಯಾಗಿದೆ. ಹೆಚ್ಚು ಹಣವನ್ನು ಸಂಗ್ರಹಿಸುವುದು ಅನಿವಾರ್ಯವಾಗಿದೆ. ಮತ್ತೊಂದು ಅಂಶವನ್ನು ತಮ್ಮ ಆದ್ಯ ಗಮನಕ್ಕೆ ತರಬಯಸುವುದೇನೆಂದರೆ ಪ್ರತಿಯೊಬ್ಬ ಸದಸ್ಯರು ದಿನಕ್ಕೆ ೧/-ರೂ.ನಂತೆ ಉಳಿಸಿ ತಮ್ಮ ವಯಸ್ಸಿಗನುಗುಣವಾಗಿ ಲೆಕ್ಕಹಾಕಿ ಅಂದರೆ ಒಬ್ಬ ವ್ಯಕ್ತಿ ೫೦ ವರ್ಷವಾಗಿದೆ ಎಂದುಕೊಂಡರೆ ೩೬೫ X ೫೦=ರೂ. ೧೮೨೫೦ ಈ ರೀತಿ ಲೆಕ್ಕಹಾಕಿ ದೇಣಿಗೆ ನೀಡುವುದರಿಂದ ಅತ್ಯಲ್ಪ ಅವಧಿಯಲ್ಲಿ ಉಳಿದ ೩.೬ ಕೋಟಿ ನಿಧಿ ಸಂಗ್ರಹಣೆಯಾಗುವುದು. ತಾವು ನೀಡುವ ದೇಣಿಗೆಯನ್ನು **'ಸಿದ್ಧಗಂಗಾ ಗುರುಕುಲ ಡೆವಲಪ್‌ಮೆಂಟ್ ಟ್ರಸ್ಟ್'** ಹೆಸರಿಗೆ ಚೆಕ್/ಡಿ.ಡಿ./ನಗದು ರೂಪದಲ್ಲಿ ನೀಡಬಹುದು. ತಾವು ನೀಡುವ ಹಣಕ್ಕೆ ಆದಾಯ ತೆರಿಗೆ ಇಲಾಖೆಯಿಂದ ೮೦ಜಿ ಅಡಿಯಲ್ಲಿ ಶೇ. ೫೦ರವರೆಗೂ ತೆರಿಗೆ ವಿನಾಯಿತಿ ಇರುತ್ತದೆ. ಅಂದರೆ ತಾವು ಈ ಟ್ರಸ್ಟ್‌ಗೆ ರೂ. ೧ ಲಕ್ಷ ನೀಡಿದರೆ ಶೇ. ೫೦ ರಿಯಾಯಿತಿ ಪಡೆಯಬಹುದು. ಅಂತೆಯೇ ೧೦ ಸಾವಿರಕ್ಕೂ ಮೇಲ್ಪಟ್ಟು ವಂತಿಗೆ ನೀಡುವ ದಾನಿಗಳ ಹೆಸರನ್ನು ಶ್ರೀಮಠದ ಆವರಣದಲ್ಲಿ ಹಾಕಲಾಗುವುದು. ಇಲ್ಲಿಯವರೆಗೆ ಲಕ್ಷಾನುಲಕ್ಷ ವಿದ್ಯಾರ್ಥಿಗಳ ಬಾಳಿಗೆ ಬೆಳಕನ್ನು ನೀಡಿದ ಶ್ರೀಮಠದ ಸೇವೆಯಲ್ಲಿ ತಾವುಗಳು ಭಾಗಿಯಾಗಿ ಉದಾರವಾದ ಕಾಣಿಕೆಯನ್ನು ನಿರೀಕ್ಷಿಸಿ ಈ ಮನವಿಪತ್ರದಲ್ಲಿ ವಿನಂತಿಸಿಕೊಳ್ಳುತ್ತೇವೆ. ತಮ್ಮೆಲ್ಲರನ್ನೂ ೨೩-೧೨-೨೦೧೮ ರಂದು ಭಾನುವಾರ ನಡೆಯುವ ಮಹಾಧಿವೇಶನಕ್ಕೆ ಆತ್ಮೀಯವಾಗಿ ಆಹ್ವಾನಿಸುತ್ತೇವೆ.

ತಮ್ಮ ಆಗಮನಾಕಾಂಕ್ಷಿಗಳು

**ಕೆ.ಹೆಚ್. ಶಿವರುದ್ರಯ್ಯ**
ಕಾರ್ಯದರ್ಶಿ

**ಡಾ॥ ಎಂ.ಎನ್. ಚನ್ನಬಸಪ್ಪ**
ಪ್ರಧಾನ ಕಾರ್ಯದರ್ಶಿ









ಚಿಂತನ

# ಭೂಮಾಚಿಂತನ

– ಶ್ರೀ ಸಿದ್ಧೇಶ್ವರ ಸ್ವಾಮಿಗಳು *

ವಸ್ತುವಿನ ಗುಣಲಕ್ಷಣಗಳನ್ನು ಮನಸ್ಸಿನಲಿ ಚಿತ್ರಿಸಿ ಕೊಳ್ಳುವುದು. ಮನಸ್ಸನ್ನು ಆ ಲಕ್ಷಣಾರ್ಥದಲ್ಲಿ ಹರವಿಕೊಳ್ಳುವುದು ಚಿಂತನ. ಅದರಿಂದ ಮನಸ್ಸು ವಿಶಾಲವಾಗುತ್ತದೆ. ಮನಸ್ಸನ್ನು ಆನಂದವು ತುಂಬಿಕೊಳ್ಳುತ್ತದೆ. ಆದ್ದರಿಂದಲೇ ಸಂತರು, ಶರಣರು ಈ ಚಿಂತನೆಗೆ ಬಹಳಷ್ಟು ಮಹತ್ವ ಕೊಟ್ಟರು. ಭಗವಂತನನ್ನು ಹಗಲು ರಾತ್ರಿ ಶರಣರು ತಮ್ಮ ಅಂತರಂಗದಲ್ಲಿ ಬಹಿರಂಗದಲ್ಲಿ ಭಾವಿಸಿದ್ದರು. ಕಣ್ಣು ಬಿಟ್ಟು ನೋಡಿದಲ್ಲೆಲ್ಲಾ ಭಗವಂತನ ಅಸ್ತಿತ್ವವನ್ನು ಹೊಂದಿಸಿದರು. ಹೊರಗೆ ಜಗತ್ತಿನ ವೀಕ್ಷಣ: ಅಂತರಂಗದಲ್ಲಿ ಅನುಭವ. ಕಣ್ಣು ಯಾವುದನ್ನು ನೋಡಿ ಅರಳುತ್ತದೆಯೋ ಮನಸ್ಸು ಅದನ್ನು ತುಂಬಿಕೊಂಡು ಸುಖಿಸುತ್ತದೆ. ಹಾಗೆ ತುಂಬಿಕೊಂಡು ಸುಖಿಸುವುದೇ ಅನುಭಾವ!

ಮರುಳುಶಂಕರದೇವರನ್ನೇ ನೋಡಿ. ದೂರದ ದೇಶದಿಂದ ಬಂದವರು. ಅಲ್ಲಿಂದ ಬಂದು ಕಲ್ಯಾಣದೊಳಗೆ ನೆಲೆಸಿದರು. ಅನೇಕ ವರ್ಷಗಳ ಕಾಲ ಮಧ್ಯದಲ್ಲಿಯೇ ಓಡಾಡಿದರೂ ಯಾರಿಗೂ ಗೊತ್ತಾಗದಂತಿದ್ದರು. ಕಳ್ಳನಲ್ಲೂ ದೇವನನ್ನು ಗುರುತಿಸುವ ಬಸವಣ್ಣನಿಗೂ ಗೊತ್ತಾಗದಂತೆ ಇದ್ದರು! ಅಷ್ಟು ಆತ್ಮಾರಾಮರು! ಸ್ವಲೀಲಾನಂದಿಗಳು! ಮಹಾ ಪ್ರಸಾದಿಗಳು! ಅವರು ಕೇಳಿದುದೆಲ್ಲ ಪ್ರಸಾದ, ಲಿಂಗಪ್ರಸಾದ, ನೋಡಿದ್ದೆಲ್ಲ ಶಿವಲಿಂಗ ಪ್ರಸಾದ. ರುಚಿಸಿದುದೆಲ್ಲಾ ಗುರು ಲಿಂಗ ಪ್ರಸಾದ. ಸುಗಂಧಿಸಿದುದೆಲ್ಲ ಆಚಾರಲಿಂಗ ಪ್ರಸಾದ.

ಗುರುಗಳ ಹತ್ತಿರ ಹೋಗುತ್ತೇವೆ. ಹಣ್ಣು ಕೊಡುತ್ತೇವೆ. ಅದನ್ನು ಅವರು ಸ್ಪರ್ಶಿಸಿ ಕೊಡುತ್ತಾರೆ. ಆಗ ಅದು ನಮಗೆ ಪ್ರಸಾದ. ಮೊದಲಿನಂತೆ ಅದು ಕೇವಲ ಹಣ್ಣಲ್ಲ. ಅದರ ಬಗೆಗಿರುವ ನನ್ನದು ಎನ್ನುವ ಭಾವನೆ ಇಲ್ಲ. ಈಗ ಅದು ಗುರುವಿನದು, ದೇವನದು ಎಂಬ ಭಾವ. ಅದು ಸ್ವೀಕಾರಾರ್ಹ. ಭಾವ ಬದಲಾಗಿದೆ; ದೃಷ್ಟಿ ಬದಲಾಗಿದೆ. ಈಗ ಅದು ಕೇವಲ ವಸ್ತುವಲ್ಲ.

ಮರುಳುಶಂಕರದೇವರು ಮಹಾಪ್ರಸಾದಿ! ಎಲ್ಲವನ್ನೂ ದೇವನದೆಂಬ ನಿರ್ಮಲ ಭಾವ ದೃಷ್ಟಿಯಿಂದ ನೋಡಿದರು! ಅವರ ಇಂದ್ರಿಯ ಪವಿತ್ರ, ಮನಸ್ಸು ಪವಿತ್ರ, ಸಮಗ್ರ ಜೀವನವೇ ಪವಿತ್ರ.

ಜನ ಊಟಮಾಡಿ ಎಲೆ ಬಿಟ್ಟು ಹೋಗುತ್ತಾರೆ. ಎಲೆ ತೆಗೆದುಹಾಕುವ ಕೆಲಸ ಮರುಳುಶಂಕರದೇವರದು. ಪ್ರಸಾದ ನಿಲಯದಲ್ಲಿ ಶೇಷವನ್ನು ಸೇವಿಸಿ ದಿವ್ಯಪ್ರಸಾದಿಯಾಗಿದ್ದರು. ಅಲ್ಲಮಪ್ರಭುವಿನಂತಹ ಜಂಗಮ ಸಾಮ್ರಾಟ, ವಿಮಲ ಜ್ಞಾನಿ, ವೈರಾಗ್ಯಚಕ್ರವರ್ತಿ ವಂದಿಸಿದ ಮರುಳುಶಂಕರದೇವರಿಗೆ! ಅವರದು ಮಲಗಿದಾಗ, ಎದ್ದಾಗ, ನಡೆವಾಗ, ನುಡಿವಾಗ ಸದ್ಭಾವ ದೇವ ಭಾವ! ನಮಗೆ ಸದಾ ಪ್ರಪಂಚಭಾವವಿರುವಂತೆ.

ಅಂತಹ ಬದುಕಿಗಾಗಿ ಭಗವತ್ ಚಿಂತನ. ಯಾವ ವಸ್ತು ಎಲ್ಲಾ ಕಡೆ ಇದೆಯೊ ಅಂತಹ ವಸ್ತುವನ್ನು ಚಿಂತಿಸುವುದು, ಅಲ್ಪಸ್ಥಲದಲ್ಲಿರುವ ವಸ್ತುವನ್ನು ಚಿಂತಿಸುವುದರಿಂದ ತೃಷ್ಣೆ ತಲೆದೋರುತ್ತದೆ. ಮನಸ್ಸು ಅಸಮಾಧಾನಗೊಳ್ಳುತ್ತದೆ. **'ನಾಲ್ಪೇ ಸುಖಮಸ್ತಿ ಯೋ ವೈ ಭೂಮಾ ತತ್‌ಸುಖಂ'** ಅಲ್ಪದರಲ್ಲಿ ಸುಖವಿಲ್ಲ, ಭೂಮದಲ್ಲಿ ಸುಖ. ಹೀಗೆ ಸನತ್ಕುಮಾರ ನಾರದನಿಗೆ ಬೋಧಿಸಿದ.

* ಜ್ಞಾನಯೋಗಾಶ್ರಮ, ಬಿಜಾಪುರ ಜಿಲ್ಲೆ.

ನಾರದ ಸುಖವನ್ನು ಬಯಸಿದ್ದ. ಸಮಾಧಾನವನ್ನು ಬಯಸಿದ್ದ. ಜಗತ್ತಿನ ಏನೆಲ್ಲವನ್ನು ಆತ ಕಂಡವ. ಸ್ವರ್ಗ, ಮರ್ತ್ಯ, ಪಾತಾಳಗಳಲ್ಲಿ ತಿರುಗಾಡಿದ. ಯಾವುದಕ್ಕೆ ಏನು ಕೊರತೆ ಇಲ್ಲದಂತಹ ಅನುಭವ. ಇಂತಹ ನಾರದನಿಗೆ ಸಮಾಧಾನ ಪಡೆಯಬೇಕಿತ್ತು. ಅದು ಕೈಲಾಸದಲ್ಲಿ ಸಿಕ್ಕಿರಲಿಲ್ಲ. ಭೂಲೋಕದಲ್ಲಿ, ಅಧೋಲೋಕದಲ್ಲಿ ಸಿಕ್ಕಿರಲಿಲ್ಲ. ನಾರದನೆಷ್ಟು ತಿರುಗಾಡಿದರೂ ಸಮಾಧಾನ ಎಲ್ಲೂ ಸಿಕ್ಕಿರಲಿಲ್ಲ. ಆಗ ಅವನಿಗೆ ಸನತ್ಕುಮಾರ ಹೇಳುತ್ತಾನೆ. 'ನೀನು ಏನೇನು ನೋಡಿದೆಯೋ ಅದು ಅಲ್ಪ. ಬಹಳ ಸಣ್ಣದು. ಯಾವುದು ಸಣ್ಣದೋ ಅದನ್ನು ನಾವು ಸಂಗ್ರಹ ಮಾಡುವುದರಿಂದ ಸುಖ ಆಗುತ್ತದೆ! ಆದರೆ ಸಮಾಧಾನ ಆಗುವುದಿಲ್ಲ!' ಸಮಾಧಾನ ಆಗುವುದು ಬೇರೆ, ಸುಖ ಆಗುವುದು ಬೇರೆ. ತುರಿಕೆಯಾದಾಗ ತುರಿಸಿದರೆ ಉಂಟಾಗುವುದು ಸುಖ. ತುರಿಕೆಯಿಲ್ಲದಾಗ ಆರೋಗ್ಯವಿದೆ, ಸಮಾಧಾನವಿದೆ. ಸುಖದ ಕೆರೆಯುವಿಕೆ ದುಃಖದಲ್ಲಿ ಪರ್ಯಾವಸಾನ. ಸಮಾಧಾನ ಹಾಗಲ್ಲ. ಅದು ಸದಾ ಹಾಗೆಯೇ.

ನಾವು ಸಣ್ಣ ಸಣ್ಣ ವಸ್ತುವನ್ನು ಪಡೆದಾಗ ಒಂದಿಷ್ಟು ಸುಖವಾಗುತ್ತದೆ. ಈಗ ಸುಖವಾಗುವುದು ಕೆಲಕಾಲದ ನಂತರ ದುಃಖವಾಗುತ್ತದೆ. ಯಾವ ಪ್ರಪಂಚ ಸುಖ ಎಂದು ತಿಳಿಯುತ್ತೇವೆಯೋ ಕೆಲವು ವರ್ಷಗಳ ನಂತರ ಅದೇ ಬೇಡವೆನಿಸುತ್ತದೆ. ಯಾವ ಮಡದಿಯ ಮುಖ ರಾಮನಿಗೆ ಮೊದಲು ಬೇಕಾಗಿರುತ್ತೋ ನಂತರ ಬೇಡ ಅನ್ನಿಸಿತು. ಆದ್ದರಿಂದ ಸೀತಾದೇವಿಯನ್ನು ಅರಣ್ಯದಲ್ಲಿ ತ್ಯಜಿಸಿದ!

ಅದು ರಾಮನ ಕಥೆಯಲ್ಲ. ಅದು ನಮ್ಮೆಲ್ಲರ ಕಥೆ! ವಾಲ್ಮೀಕಿ ಸೂಚ್ಯವಾಗಿ ಕಥಾ ರಚಿಸಿದ್ದಾನೆ. ರಾಮನದಲ್ಲ ಅದು. ನಮಗೂ ಹಾಗೆ ಅನ್ನಿಸುತ್ತದೆ. ಮೊದಮೊದಲು ಬಹಳ ಹಿಡಿಸುತ್ತದೆ ಸಂಸಾರ. ನಂತರ ರಾಮಾಯಣ! ಬಳಿಕ ಸಂಸಾರ ಬೇಡವೆನಿಸುತ್ತದೆ. ಸಮಾಧಾನಕ್ಕಾಗಿ ಮನಸ್ಸು ಹಾತೊರೆಯುತ್ತದೆ. ಆ ಸಮಾಧಾನವು ಭೂಮಾ ಚಿಂತನೆಯಲ್ಲಿದೆ.

'ಭೂಮಾ' ಎಂದರೆ ಅನಂತ. ಯಾವುದರಲ್ಲಿ ಬೇರೆ ಏನನ್ನೂ ಬೇರಾಗಿ ಕೇಳಲಾಗುವುದಿಲ್ಲವೋ, ನೋಡಲಾಗುವುದಿಲ್ಲವೋ, ಚಿಂತಿಸಲಾಗುವುದಿಲ್ಲವೋ ಅದು ಭೂಮಾ. ಹಾಗಲ್ಲದುದು ಅಲ್ಪ. ಈ 'ಹೂ' ಅಲ್ಪ. ಜಗತ್ತಿನ ಎಲ್ಲ ವಸ್ತುಗಳೂ ಅಲ್ಪ! ಭಿನ್ನತೆಗೆ ಅಲ್ಲಿ ಅವಕಾಶವಿದೆ. ಅವು ಒಂದು ಸ್ಥಾನದಲ್ಲಿವೆ; ಮತ್ತೊಂದು ಸ್ಥಾನದಲ್ಲಿ ಇಲ್ಲ; ಒಂದು ಕಾಲದಲ್ಲಿವೆ; ಇನ್ನೊಂದು ಕಾಲದಲ್ಲಿ ಇಲ್ಲ.

ಪರಮಾತ್ಮ ಹೇಗಿದ್ದಾನೆ? ವಸ್ತುವಿನಿಂದ ಪರಿಮಿತ ಅಲ್ಲ, ದೇಶದಿಂದ ಪರಿಮಿತ ಅಲ್ಲ, ಕಾಲದಿಂದ ಪರಿಮಿತ ಅಲ್ಲ. ಭಾವದಿಂದಲೂ ಪರಿಮಿತ ಅಲ್ಲ. ಅವನು ನಿಜವಾದ ಭೂಮಾ. ಸರ್ವವ್ಯಾಪಕ! ನಾವು ಪೂಜಿಸುವ ದೇವರು ಕಾಲ, ದೇಶ ಸೀಮಿತವಾಗಿದ್ದರೆ ಅದು ದೇವರೇ ಅಲ್ಲ! ಪರಮಾತ್ಮ ಅಲ್ಲ. ಈ ದೇಶ ಅವನನ್ನು ಕಟ್ಟಿಹಾಕಬಾರದು. ದೇಗುಲ ಭಗವಂತನನ್ನು ಕಟ್ಟಿಹಾಕಬಾರದು. ಹಾಗೆ ಕಟ್ಟಿ ಹಾಕಿತು ಎಂದರೆ ಭಗವಂತ ಅಲ್ಪನಾಗಿ ಬಿಡುತ್ತಾನೆ. ಭಾರತೀಯ ದೇವರು ಯುರೋಪ್‌ನೊಳಗೆ ಹೋಗದು. ಯುರೋಪ್‌ನ ದೇವರು ಭಾರತೀಯ ಗುಡಿಯೊಳಗೆ ಬರದು. ಬರಲು ಹೆದರುತ್ತದೆ. ಏಕೆ? ಈ ದೇವರೆಲ್ಲ 'ಅಲ್ಪ'! 'ಭೂಮಾ' ದೇವರಿಗೆ ಭಾರತವೇನು? ಯುರೋಪ್ ಏನು?

ಒಂದು ದೇಶದಲ್ಲಿ ಇದ್ದು ಇನ್ನೊಂದು ದೇಶದಲ್ಲಿ ಇರದಿದ್ದರೆ ಅದು ಪರಿಮಿತ. ನಾರಾಯಣನ ಗುಡಿಯೊಳಗೆ 'ಶಿವ' ಇರುವುದಿಲ್ಲ ಎಂದು ಕೆಲವರು. ಶಿವನ ಗುಡಿಯೊಳಗೆ 'ನಾರಾಯಣ' ಇರುವುದಿಲ್ಲ ಎಂದು ಕೆಲವರು. ನಿಜವಾದ 'ಶಿವ' ನಾರಾಯಣ ಇಬ್ಬರೂ ಒಂದೇ. ಆತ ನಮ್ಮ ಅಲ್ಪತೆಯ ಮೂರ್ಖತನ ಕಂಡು ನಗುತ್ತಾನೆ. ಮನುಷ್ಯ ತಮ್ಮ ಅಲ್ಪತನವನ್ನು ದೇವರ ಮೇಲೆ ಹೇರುತ್ತಾನೆ. ತಿಳಿದ ಸಂತರು ಹಾಗಲ್ಲ. ಅವರು ಅವನಷ್ಟೇ ಅನಂತ ಭಾವಿಗಳು.

ಶ್ರೇಷ್ಠ ಸಂತರು, ಮಹಂತರು ಯಾವ ಜಾತಿಗೆ ಸಂಬಂಧಪಟ್ಟವರು? ಯಾವುದಾದರೂ ದೇಶಕ್ಕೆ ಸಂಬಂಧ ಪಟ್ಟವರೆ? ಯಾವುದಾದರೂ ಭಾಷೆಗೆ ಸಂಬಂಧಪಟ್ಟವರೆ? ಎಮ್ಮ ಶರಣರು ದೇಶ ಭಾಷಿಕರಲ್ಲ. ದೇಶಾಭಿಮಾನಿಗಳಲ್ಲ. ದೇಶಾಂತರ ಮಾಡುವರು.



ಇಂತಹ ಶರಣರ ತಂದು ಮನೆಯೊಳಗೆ ಇಟ್ಟು ಕೀಲಿ ಹಾಕಿದ್ದೇವೆ, ಇವರು ನಮ್ಮವರು, ಅವರು ನಿಮ್ಮವರು ಎಂದು. 'ಜಗದಗಲ, ಮುಗಿಲಗಲ' ಎಂದು ಹೇಳಿಕೊಂಡ ಬಸವಣ್ಣನವರನ್ನು ನಮ್ಮ ಸಂಕುಚಿತ ಚೌಕಟ್ಟಿನಲ್ಲಿ ಬಂಧಿಸಿದ್ದೇವೆ. ಯಾವುದೇ ಶರಣರು ಸಣ್ಣವರಾಗಿರುವುದು ಹೇಗೆ ಸಾಧ್ಯ? ಅವರು ಎಲ್ಲವನ್ನೂ ಮೀರಿರುತ್ತಾರೆ. ಯಾವುದರಲ್ಲೂ ಸಿಲುಕಿ ಕೊಂಡಿರುವುದಿಲ್ಲ.

ನಮಗೆ ಬಸವಣ್ಣ, ಶಂಕರ ಯಾಕೆ ಪ್ರಿಯ ಹೇಳಿ? ಯಾಕೆ ಅಂದರೆ ಎಲ್ಲವನ್ನೂ ಮೀರಿದ್ದಾರೆ ಅವರು. ಭೂಮಾವನ್ನರಿತವರು. ಅವರು ಯಾವ ಮಿತಿಯೊಳಗೂ ಸಿಕ್ಕಿಲ್ಲ. ಅಂತಹ ವಸ್ತುವನ್ನು ಅನುಭವಿಸಿದ್ದಾರೆ! ಎಂತಲೇ ಅಂಥವರಿಗೆ ಜಗತ್ತೆಲ್ಲಾ ತಲೆಬಾಗುತ್ತದೆ.

ಸಾಗರವನ್ನು ಕಂಡ ಬಳಿಕ, ಸಣ್ಣಪುಟ್ಟ ಕೊಳಗಳ ಬಗೆಗೆ ಅಭಿಮಾನ ಇರುವುದಿಲ್ಲ. ಬಳಸುವುದಿಲ್ಲವೆಂದಲ್ಲ, ಬಳಸುತ್ತಾರೆ. ಆದರೆ ಅಭಿಮಾನ ಉಳಿಯುವುದಿಲ್ಲ. ಕೊಳದ ನೀರನ್ನು ಬಳಸಿದರೂ ಅಭಿಮಾನವಿಲ್ಲ. ಏಕೆಂದರೆ ಸಾಗರದ ದರ್ಶನವಾಗಿರುತ್ತದೆ! ಹಾಗೆ ಭಗವಂತನನ್ನು ಇಷ್ಟಲಿಂಗ, ಇಷ್ಟದೇವ ಅಥವಾ ಮತ್ತೆ ಇನ್ನೇನಾಗಿಯಾದರೂ ಪೂಜಿಸಿ! ಅವುಗಳ ಅಭಿಮಾನ ಮಾತ್ರ ಬೇಡ.

ದೇವರು ಹಿಂದಕ್ಕೆ ಇದ್ದ. ಈಗಿಲ್ಲ! ಈತ ಜಾಗ್ರತ ದೇವರು. ಈತ ಅಜಾಗ್ರತ ದೇವರು, ಎನ್ನುತ್ತೇವೆ! ದೇವರು ಸಹಿತ ಜಾಗ್ರತ ಅಜಾಗ್ರತ! ನಮ್ಮದು ತಪ್ಪು ತಿಳುವಳಿಕೆ. ನಮ್ಮದು ಸಮಲ ದೃಷ್ಟಿ! ಏಕೆ ಹೀಗೆ? ನಾವು ಸತ್ಯದ ಚಿಂತನೆ ಮಾಡಿಲ್ಲ. ನಮ್ಮ ಬದುಕಿನಲ್ಲಿ ಕಾಣುವಂಥದು ಅವನಿಗೂ ಅನ್ವಯಿಸುವುದೆಂಬ ಕಲ್ಪನೆ! ನಮಗೆ ಮಿತಿ. ಅವನಿಗೂ ಮಿತಿ ಹಾಕುವ ಯತ್ನ!

ದೇವರ ವಿಷಯದಲ್ಲಿ ಭಿನ್ನವಾದ, ಭಗ್ನವಾದ, ಒಡೆದು ಹೋದ, ಹೀಗೆಲ್ಲಾ ಭಾಷೆ ಬಳಸುತ್ತೇವೆ. ದೇವರೆಂದಾದರೂ ನಾಶವಾಗಬಹುದೆ? ಒಡೆವೆ ವಸ್ತುವಿನೊಳಗಿದ್ದು ಒಡೆದು ಹೋಗಬಲ್ಲನೆ? ಹಿಂದಿದ್ದು ಇಂದು ಇಲ್ಲದಾಗಬಹುದೆ? ಎಲ್ಲ ನಮ್ಮ ಅಜ್ಞಾನ!

ದೇವನು ಹೇಗೆ ಕಾಲ ದೇಶ ಮಿತನಲ್ಲವೋ ಹಾಗೆ ವಸ್ತುಮಿತನೂ ಅಲ್ಲ. ಆತ ಈ ವಸ್ತುವಿನಲ್ಲಿದ್ದಾನೆ. ಈ ವಸ್ತುವಿನಲ್ಲಿ ಇಲ್ಲ ಎನ್ನುತ್ತೇವೆ. ಸುಂದರವಾಗಿ ಕೆತ್ತಿದ ಮೂರ್ತಿಯಲ್ಲಿ ದೇವರಿಲ್ಲ ಎಂದು ತಿಳಿದು ಅದರಲ್ಲಿ ಹಲವಾರು ಧಾರ್ಮಿಕ ಕ್ರಿಯೆಗಳಿಂದ ಪ್ರಾಣಪ್ರತಿಷ್ಠಾಪನೆ ಮಾಡುತ್ತೇವೆ. ಕಲ್ಲು ಕೆತ್ತುವ ಮೊದಲೂ ದೇವರು ಇತ್ತು. ಕಲ್ಲನ್ನು ಕೆತ್ತಿ ಸುಂದರ ಮಾಡಿದಾಗಲೂ ದೇವರು ಇತ್ತು. ಈಗ ಗುರುಗಳು ಹಸ್ತ ಇಟ್ಟ ಕೂಡಲೇ ದೇವರು ನಮ್ಮ ಭಾವದಲ್ಲಿ ಕಾಣತೊಡಗಿತಷ್ಟೇ. ಮೊದಲು ನೋಡಿದಾಗ ದೇವರು ಕಂಡಿರಲಿಲ್ಲ. ದೃಷ್ಟಿ ಬದಲಾಗಿತ್ತು! ಆ ವಸ್ತುವನ್ನು ಸುಂದರಗೊಳಿಸಿ ಇಟ್ಟಾಗಲೂ ದೇವರು ಕಂಡಿರಲಿಲ್ಲ. ಸಂತರು, ಮಹಂತರು ಸ್ಪರ್ಶ ಮಾಡಿದ ಕೂಡಲೇ ದೇವರು ಕಾಣ ಬಂದ ಎಂದು ಭಾವಿಸುತ್ತೇವೆ. ನಿಜವಾಗಿಯೂ ಆ ಕಲ್ಲಿನಲ್ಲಿ ದೇವರಿದ್ದ. ಈ ನಮ್ಮ ಕಣ್ಣಿನೊಳಗೆ ದೇವರಿರಲಿಲ್ಲ ಎನ್ನಿ! ಗುರುವಿನಿಂದ ಶಕ್ತಿಪಾತವಾದುದು ಕಲ್ಲೊಳಗಲ್ಲ. ನಮ್ಮ ಭಾವದೊಳಗೆ.

ಕೆಲವು ವಸ್ತುಗಳಲ್ಲಿ ದೇವರ ಅಂಶ ಹೆಚ್ಚು. ಕೆಲವು ವಸ್ತುಗಳಲ್ಲಿ ದೇವರ ಅಂಶ ಕಡಿಮೆ. ಇಂತಹ ಕಲ್ಪನೆ ಅತಾತ್ವಿಕ. ಎಲ್ಲಾ ವಸ್ತುಗಳಲ್ಲಿ ದೇವನಿದ್ದಾನೆ ಸಮನಾಗಿ. ಯಾವುದೇ ಸಂಖ್ಯೆ ತೆಗೆದುಕೊಳ್ಳಿ. ಪ್ರತಿಯೊಂದು ಸಂಖ್ಯೆಯಲ್ಲಿ 'ಒಂದು' ಇದೆ. +೧ ಆದಾಗ ಎರಡು ಆಗುತ್ತದೆ. +೧ ಆದಾಗ ೩ ಆಗುತ್ತದೆ. ಯಾವುದೇ ಸಂಖ್ಯೆ ಇರಲಿ. ಅದರಲ್ಲಿ ಒಂದು, ಒಂದು ಕಳೆದರೆ ಉಳಿಯುವುದು ಶೂನ್ಯ. ವಿಶ್ವದ ವಸ್ತುಗಳು ಸಂಖ್ಯೆಯಂತೆ. ಪ್ರತಿಸಂಖ್ಯೆಯ ಅಂತರಂಗದಲ್ಲಿ, ಆದ್ಯಂತದಲ್ಲಿ ಶೂನ್ಯವಿರುವಂತೆ ವಿಶ್ವದ ಅಂತರಂಗದಲ್ಲಿ, ಆದ್ಯಂತದಲ್ಲಿ ಪರಬ್ರಹ್ಮ. ಅದು ಭೂಮಾ, ಸಂಖ್ಯೆಯೇ ಅಂದರೆ ಒಂದು ಎನ್ನುವುದೇ 'ಅಲ್ಪ', ಅದು ಮೂಲ ಪ್ರಕೃತಿ. ಸಂಖ್ಯೆಯು ಪರಿಮಿತ. ಶೂನ್ಯ 'ಅಪರಿಮಿತ'. ಹಾಗೆ ಜಗತ್ತು ಹಾಗೂ ಜಗತ್ತಿನ ವಸ್ತು ಪರಿಮಿತ. ದೇವನು ಅಪರಿಚ್ಛಿನ್ನ! ಅಪರಿಮಿತ!

'ಭಾವಪರಿಮಿತಿ' ಕೂಡ ದೇವನಿಗಿಲ್ಲ. ಯಾವುದೇ ಭಾವ ಮನಸ್ಸಿನ ಮಧ್ಯ ಮೂಡಿದರೂ ಆ ಭಾವದ ಅಂತರಂಗದಲ್ಲಿ ಅದೇ ವಸ್ತು ತುಂಬಿಕೊಂಡಿರುತ್ತದೆ.







'ಇಲ್ಲ' ಎನ್ನುವ ಭಾಷೆಯೊಳಗೆ ದೇವರು ಇದ್ದಾನೆ. 'ಇದೆ' ಎನ್ನುವ ಭಾವದೊಳಗೂ ದೇವರು ಇದ್ದಾನೆ. ಇಲ್ಲ ಎನ್ನುವಾಗಲೂ ಅಸ್ತಿತ್ವ ಇದೆ. ಇದೆ ಎನ್ನುವಾಗಲೂ ಅಸ್ತಿತ್ವ ಇದೆ. ಈ ಅಸ್ತಿತ್ವ 'ಇಲ್ಲ'ಕ್ಕೂ ಆಧಾರ – 'ಇದೆ'ಗೂ ಆಧಾರ. ಏಕೆಂದರೆ 'ಇಲ್ಲ' ಎನ್ನುವುದೂ ಒಂದು ಭಾವವೇ. 'ಇದೆ' ಎನ್ನುವುದೂ ಒಂದು ಭಾವವೇ. ಭಾವಕ್ಕೆ ಅಸ್ತಿತ್ವ ಇದೆ. ಆ ಅಸ್ತಿತ್ವವೇ ದೇವರು. ಯಾವುದು ಭಾವದಿಂದ ಮಿತವಾಗುತ್ತದೆ, ಅದು ದೇವರಲ್ಲ. ಪುರುಷ ಭಾವದಿಂದ ದೇವರು ಮಿತನಾದರೆ ಸ್ತ್ರೀ ದೇವರಲ್ಲ. ಸ್ತ್ರೀ ಭಾವದಿಂದ ದೇವರು ಮಿತನಾದರೆ ಪುರುಷನು ದೇವರಲ್ಲ. ನಿಜವಾದ ದೇವರು ಭಾವಮಿತನಲ್ಲ. ಸ್ತ್ರೀ ಭಾವನೆಗೂ ಆಧಾರ, ಪುರುಷ ಭಾವನೆಗೂ ಆಧಾರ. ಭಾವ ಪರಿಚ್ಛಿನ್ನತೆ ಅವನಲ್ಲಿಲ್ಲ.

ಇಂತು ನಾಲ್ಕು ಪರಿಚ್ಛಿನ್ನತೆಗಳನ್ನು ತೆಗೆದೊಗೆದು ಬಳಿಕ ಏನುಳಿದಿರುತ್ತದೆ ಅದು ದೇವರು! ನಾಲ್ಕನ್ನು ಹಾಕಿದಾಗ ಏನು ಕಾಣಿಸುತ್ತದೆ ಅದು ಜಗತ್ತು! ಇದು ಅಲ್ಲ. ಅದು 'ಭೂಮಾ'! ಈ 'ಅಲ್ಪ'ದರ ಮಧ್ಯ ಇರುವ 'ಭೂಮಾ'ವನ್ನು ಚಿಂತಿಸಬೇಕು. ಬಂಧುಬಾಂಧವರ ಮಧ್ಯೆ ಬಾಳಬೇಕು. ವಸ್ತುಗಳ ಸಂಚಯದ ಮಧ್ಯೆ ಜೀವನವನ್ನು ಕಟ್ಟಿಕೊಳ್ಳಬೇಕು. ಆದರೆ ಅಂತರಂಗದ ತುಂಬಾ ಕಣ್ಣಿನಲ್ಲೆಲ್ಲಾ ಒಂದು ವಸ್ತು ಸ್ಪಷ್ಟವಾಗಿ ಇರಬೇಕು. ಅದು 'ಭೂಮಾ'! ಹೀಗೆ 'ಭೂಮಾ'ವನ್ನು ದೃಷ್ಟಿಯೊಳಗೆ ಇಟ್ಟುಕೊಳ್ಳುವುದಕ್ಕೆ ಭಗವತ್ ಚಿಂತನೆ ಎನ್ನಬೇಕು. ಹೀಗೆ ಚಿಂತನ ಮಾಡಿದರೆ ನಾನು ನೀವು ಬೇರೆ ಬೇರೆಯಾಗಿ ಎನ್ನಬೇಕು. ಹೀಗೆ ಚಿಂತನ ಮಾಡಿದರೆ ನಾನು ನೀವು ಬೇರೆ ಬೇರೆಯಾಗಿ ಕಾಣದು. ಜಾತಿ ಭೇದ, ಲಿಂಗ ಭೇದ ತೋರದು.

ನಾನು ಪುರುಷನೂ ಅಲ್ಲ, ಸ್ತ್ರೀಯೂ ಅಲ್ಲ. ನನ್ನಷ್ಟಕ್ಕೆ ನಾ ನನ್ನೊಳಗೆ ನಾ ನೋಡಿಬಿಟ್ಟರೆ ಅಲ್ಲಿ ಪುರುಷ ಇಲ್ಲ, ಸ್ತ್ರೀ ಇಲ್ಲ! ಯಾವಾಗ ದೇಹದ ಕಲ್ಪನೆ ಬಂತೋ ಪುರುಷ ಭಾವ ಬಂತು. ಸ್ತ್ರೀ ಭಾವವಂತು. ಆ ದೇಹದ ಕಲ್ಪನೆ ಬಿಟ್ಟು ಉಳಿದ 'ನಾ' ಅನ್ನುವುದಕ್ಕೆ ಲಿಂಗ ಇಲ್ಲ! ಸ್ತ್ರೀ ಇದ್ದರೂ ಸರಿ, ಪುರುಷ ಇದ್ದರೂ ಸರಿ. ಅದೆಲ್ಲಾ ವ್ಯಾವಹಾರಿಕ. ಪಾರಮಾರ್ಥಿಕವಲ್ಲ.

'ಭೂಮಾ' ಚಿಂತನೆ ಮಾಡಿದರೆ ನಾವು ನಿಶ್ಚಲರೂ ನಿಶ್ಚಿಂತರೂ ಆಗುತ್ತೇವೆ. ಕಂಡದ್ದಕ್ಕೆಲ್ಲಾ ಚಿಂತಿಸುವುದಿಲ್ಲ. ಆಗದುದಕ್ಕೆಲ್ಲ ತಲೆ ಕೆಡಿಸಿಕೊಳ್ಳುವುದಿಲ್ಲ. ಬಾಹ್ಯ ಜಗತ್ತಿನ ದ್ವಂದ್ವಗಳನ್ನು, ಸುಖ-ದುಃಖಗಳನ್ನು ಅನುಭವಿಸುತ್ತೇವೆ. ಆದರೆ ಅದೆಲ್ಲಾ ಮೇಲೆ ಮೇಲೆ. ಒಳಗೆಲ್ಲಾ ಪ್ರಶಾಂತ. ಹೊರಗೆ ಜಗತ್ತು. ಒಳಗೆ ದೇವರು!

ಸೌಂದರ್ಯಕ್ಕೆ ಆಳ ಇಲ್ಲ. ಮೇಲಿನ ಚರ್ಮದ ಹೊದಿಕೆ ತೆಗೆದರೆ ಆ ದೇಹ ಕಂಡು ಮರುಳಾಗುವವರು ಯಾರಿದ್ದಾರೆ? ಹಾಗೆ ಜಗತ್ತು. ಮೇಲೆ ಮಾತ್ರ. ಅದಕ್ಕೆ ಆಳವಾದ ಅಸ್ತಿತ್ವವಿಲ್ಲ. ನೋಡಲು ಮಾತ್ರ ಇದೆ. ಅದರ ಅಂತರಂಗದಲ್ಲಿ ಘನವಾಗಿರುವುದು 'ದೇವ!' ಅದನ್ನು ನೋಡಿದರೆ ಮರುಳಾಗುವ ಪ್ರಮೇಯವಿಲ್ಲ. ಅದನ್ನು ನೋಡಲು 'ಚಿಂತನ' ಅವಶ್ಯ.

ಯಾರ ಪ್ರಪಂಚ ಎಷ್ಟು ದೊಡ್ಡದಾಗಿ ಕಂಡರೂ ಅದಕ್ಕೆ ಆಳ ಇರುವುದಿಲ್ಲ. ಹೀಗೆ ತಿಳಿದುಕೊಂಡರೆ ಎಷ್ಟು ಆನಂದ ಪೂರ್ಣವಾಗುತ್ತದೆ. ರಾಜಮಹಾರಾಜರ ಪ್ರಪಂಚ ಭವ್ಯವಾಗಿ ಕಾಣುತ್ತದೆ. ಆದರೆ ಅವರ ಸಮೀಪ ಹೋದರೆ-ಅದರ ಆಳ-ಅಲ್ಪತೆ ಗೊತ್ತಾಗುತ್ತದೆ. ಹೊರ ಹೊಳಪು! ಒಳಗೆಲ್ಲಾ ಚಿಂತೆ! ಎಷ್ಟು ರಾಜರು ಆತ್ಮಹತ್ಯೆ ಮಾಡಿಕೊಂಡಿಲ್ಲ? ಎಷ್ಟು ಸಿರಿವಂತರು ಹುಚ್ಚರಾಗಿಲ್ಲ? ಆದ್ದರಿಂದ ಹೊರ ವೈಭವ ಕಂಡು ಮರುಳಾಗಬಾರದು ಅಲ್ಲವೆ? ಪ್ರಾಪಂಚಿಕ ವೈಭವವೆಂದರೆ ತಗಣಿಗಳಿಂದ ತುಂಬಿದ 'ರಾಜ ಗದ್ದಿಗೆ!' ಕುಳಿತವನಿಗೆ ಅದರ ತಾಪ ತಿಳಿಯುತ್ತದೆ, ನೋಡುವವರಿಗೆ ಭವ್ಯವಾಗಿ ತೋರುತ್ತದೆ.

ಇದನ್ನು ಅರಿತರೆ ಜೀವನ ಅಪ್ಯಾಯಮಾನ. ದೂರದ ಗುಡ್ಡ ನೋಡಲು ಸುಂದರ. ನೋಡಿಯೇ ಹರ್ಷಿಸಬೇಕು! ತಾನಿರುವ ಗುಡ್ಡ ತ್ಯಜಿಸಿ ಮೃಗಜಲದ ಶೋಧ ಮಾಡಬೇಕಿಲ್ಲ. 'ಅಲ್ಪ'ವಾದುದೆಲ್ಲ ಅಷ್ಟೇ. ಸುಖ ದುಃಖ ಎರಡೂ ಅದರಲ್ಲಿವೆ. 'ಭೂಮಾ' ಚಿಂತಿಸಿ, ಭಾವಿಸಿ, ಅದು ಸತ್ಯ. ಸಮಾಧಾನವೀಯುತ್ತದೆ.

■

(ಕೃಪೆ: ಭಗವಚ್ಚಿಂತನ)







ನುಡಿನಮನ

# ಮಣ್ಣನ್ನು ಹೊನ್ನಾಗಿಸಿದ ತಪೋಮೂರ್ತಿ

– ಬಿ.ಎಂ. ಪರಮೇಶ್ವರಪ್ಪ *



ಇತ್ತೀಚಿನ ವಿದ್ಯುನ್ಮಾನದ ವರದಿಯಂತೆ ಜಗತ್ತಿನಲ್ಲಿ ೭೦೦ ಕೋಟಿ ಜನಸಂಖ್ಯೆ ಇದ್ದು, ಇದರಲ್ಲಿ ಭಾರತ ದೇಶದ ಜನಸಂಖ್ಯೆ ೧೩೦ ಕೋಟಿ. ಜಗತ್ತಿನ ಒಟ್ಟು ಜನಸಂಖ್ಯೆಯಲ್ಲಿ ೧೦೦ ವರ್ಷಕ್ಕೂ ಮೇಲ್ಪಟ್ಟು ಇರುವ ೧೦ ಜನರಲ್ಲಿ ಪರಮಪೂಜ್ಯ ಡಾ॥ ಶ್ರೀ ಶ್ರೀ ಶಿವಕುಮಾರಶಿವಯೋಗಿಗಳು ೬ನೇ ಸ್ಥಾನದಲ್ಲಿದ್ದಾರೆ. ಭಾರತದಲ್ಲಿ ಮೊದಲಿಗರಾಗಿದ್ದಾರೆ. ಜಗತ್ತಿನಲ್ಲಿ ೧೦೦ ವರ್ಷ ಬದುಕಿದವರು ಅನೇಕರಿರಬಹುದು. ಆದರೆ ಅವರ ಬದುಕಿನ ಅವಧಿಯಲ್ಲಿ ಸಮಾಜಕ್ಕೆ ಸಲ್ಲಿಸಿದ ಸೇವೆ ಎಷ್ಟು ವರ್ಷಗಳು ಎನ್ನುವುದು ಅತೀ ಮುಖ್ಯ. ಬಹುತೇಕರು ೩೦, ೪೦, ೫೦ ವರ್ಷಗಳು ತಮಗೋಸ್ಕರ, ತಮ್ಮ ಕುಟುಂಬಕ್ಕೋಸ್ಕರ ಸೇವೆ ಮಾಡಿರುವುದನ್ನು ಕಾಣುತ್ತೇವೆ. ಈ ಗುಂಪಿನಲ್ಲಿ ಕೆಲವೇ ಕೆಲವು ಜನ ಸ್ವಸ್ಥ ಸಮಾಜದ ನಿರ್ಮಾಣಕ್ಕೆ ಸೇವೆ ಸಲ್ಲಿಸಿದ್ದಾರೆಂಬುದನ್ನು ಕಾಣಬಹುದಾಗಿದೆ. ಆದರೆ ಜಗತ್ತಿನ ಇತಿಹಾಸದಲ್ಲಿ ಲೋಕವೇ ನನ್ನ ಮನೆ, ವಿಶ್ವವೇ ನನ್ನ ಕುಟುಂಬ ಎಂದು ೮೮ ವರ್ಷಗಳ ದೀರ್ಘಕಾಲ ವಿಶೇಷ ಸೇವೆ ಸಲ್ಲಿಸಿದವರು ಇಲ್ಲವೆನ್ನಬಹುದು. ಆದರೆ ಒಬ್ಬರೇ ಒಬ್ಬರು ಮಾತ್ರ ಇದ್ದಾರೆ, ಅವರೇ ಶ್ರೀ ಸಿದ್ಧಗಂಗಾಮಠದ ಡಾ॥ ಶ್ರೀ ಶ್ರೀ ಶಿವಕುಮಾರ ಶಿವಯೋಗಿಗಳು. ಇದು ವಿಶ್ವದಾಖಲೆಯೂ ಆಗಿರುತ್ತದೆ ಎಂದು ನನ್ನ ಅನಿಸಿಕೆ.

ಇತ್ತೀಚಿನ ದಿನಗಳಲ್ಲಿ ಮನುಷ್ಯ ೮೦ ವರ್ಷಗಳು ಬದುಕುವುದೇ ದುಸ್ತರವಾಗಿದೆ. ಪರಮಪೂಜ್ಯರು ೮೮ ವರ್ಷಗಳ ಸುದೀರ್ಘಕಾಲ ಪರಮದಾಸೋಹ ಜೀವನದ ಸೇವೆ ಸಲ್ಲಿಸಿರುವುದೇ ಒಂದು ವಿಸ್ಮಯವಾಗಿದೆ. ಶರಣರ ದೃಷ್ಟಿಯಲ್ಲಿ ಮಾಡಿ ಮರೆಯೋದು ವಿರಾಗ, ಮಾಡಿ ಮೌನವಾಗಿರುವುದು ದೇವರು. ಇದೇ ಪರಮದಾಸೋಹ ಜೀವನ.

ಪರಮಪೂಜ್ಯರ ಪರಮದಾಸೋಹ ಜೀವನ ಸುಖದ ಸುಪ್ಪತ್ತಿಗೆಯಾಗಿರಲಿಲ್ಲ. ಮುಳ್ಳುಕಂಠಿಯ ಹಾದಿಯಾಗಿತ್ತು. ಪೂಜ್ಯರು ವಿರಕ್ತಾಶ್ರಮ ಸ್ವೀಕರಿಸಿದಾಗ ಮಠದ ಆರ್ಥಿಕ ಪರಿಸ್ಥಿತಿ ದುಸ್ತರವಾಗಿತ್ತು. ಶ್ರೀಮಠದಲ್ಲಿದ್ದ ವಿದ್ಯಾರ್ಥಿಗಳಿಗೆ ಎರಡು ಹೊತ್ತಿನ ಪ್ರಸಾದ ಪೂರೈಸುವುದೇ ಬಹುಕಠಿಣವಾಗಿತ್ತು. ಲಿಂ. ಪೂಜ್ಯ ಶ್ರೀಉದ್ದಾನಶಿವಯೋಗಿಗಳವರ ಮಾರ್ಗದರ್ಶನ ಹಾಗೂ ಅವರ ಕೃಪಾಶೀರ್ವಾದದಿಂದ ಶ್ರೀ ಶಿವಕುಮಾರಶಿವಯೋಗಿಗಳು ವಿಸ್ಮಯಕ್ಕೆ ಕಾರಣವಾಗುವಂತೆ ಸೇವೆ ಸಲ್ಲಿಸಿದ್ದಾರೆ. ಶ್ರೀಮಠವನ್ನು ಜಗತ್ತಿನ ಭೂಪಟದಲ್ಲಿ ಗುರುತಿಸುವಂತೆ ಮಾಡುವಲ್ಲಿ ಪೂಜ್ಯರ ಸೇವೆ ಅನನ್ಯ, ಅನುಪಮ, ಅವರ್ಣನೀಯ. ಇದಕ್ಕೆ ಇಂಬೆನ್ನುವಂತೆ ೩೧ ವರ್ಷಗಳ ಹಿಂದಿನ ಘಟನೆಯನ್ನು ಸ್ಮರಿಸುವುದು ಸೂಕ್ತವೆನಿಸುತ್ತದೆ. ಪಂಚಪೀಠದ ಜಗದ್ಗುರುಗಳಲ್ಲಿ ಒಬ್ಬರಾದ ಕಾಶೀಪೀಠದ ಜಗದ್ಗುರು ಲಿಂ. ಶ್ರೀ ವಿಶ್ವೇಶ್ವರಶಿವಾಚಾರ್ಯ ಭಗವತ್ಪಾದರು

* ನಿವೃತ್ತ ಕಾರ್ಯಪಾಲಕ ಅಭಿಯಂತರರು, ಬಾಸೂರು







೧೯೩೩ರಲ್ಲಿ ತುಮಕೂರಿಗೆ ಬಂದಾಗ ಶ್ರೀಮಠದ ನಿಷ್ಕಳಂಕ ಸೇವಾ ಕಾರ್ಯವನ್ನು ತಿಳಿದುಕೊಂಡು ಸಂತೋಷ ಪಟ್ಟಿದ್ದರಂತೆ. ೫೪ ವರ್ಷಗಳ ನಂತರ ಜಗದ್ಗುರುಗಳು ತುಮಕೂರಿಗೆ ದಯಮಾಡಿಸಿ ಶ್ರೀಮಠದ ಅದ್ಭುತ ಸೇವಾಕಾರ್ಯಕ್ಕೆ ಮನಸಾರೆ ಮೆಚ್ಚಿ ೦೯-೧೧-೧೯೮೭ ರಂದು ತುಮಕೂರಿನ ಧಾರ್ಮಿಕ ಸಮಾರಂಭದಲ್ಲಿ ಶ್ರೀ ಶಿವಕುಮಾರ ಶಿವಯೋಗಿಗಳ ಸೇವಾ ಕೈಂಕರ್ಯಗಳ ಬಗ್ಗೆ ಅವರ ಆಶೀರ್ವಚನದಲ್ಲಿ ವರ್ಣಿಸಿದ್ದು ಹೀಗೆ ಅವರದೇ ಹೃದಯಾಂತರಾಳದ ಮಾತು **'ಮಣ್ಣನ್ನು ಹೊನ್ನಾಗಿ ಮಾಡಿದ ತಪೋಮೂರ್ತಿಗಳು ಸಿದ್ಧಗಂಗೆಯ ಸ್ವಾಮಿಗಳು'** ಮುಂದುವರಿದು ಶಿವಕುಮಾರ ಮಹಾಸ್ವಾಮಿಗಳವರ ಸೇವೆಯನ್ನು ೧೮ ಪುರಾಣಗಳಲ್ಲೇ ಅಲ್ಲ; ೧೦೮ ಪುರಾಣಗಳಲ್ಲಿ ಹೊಗಳಿದರೂ ಕಡಿಮೆಯೇ! ಪೂಜ್ಯರ ಈ ಸೇವೆಯ ಮಹತ್ತು ಬೃಹತ್ತನ್ನು ಊಹಿಸಲು ಓದುಗರಿಗೆ ಬಿಡಲಾಗಿದೆ.

ಇದಕ್ಕೆ ಪೂರಕವೆನ್ನುವಂತೆ ಶ್ರೇಷ್ಠ ಪ್ರವಚನಕಾರರು, ಮಧುರ ಹೃದಯಿಗಳು ಆದಂತ ಶರಣರಾದ ಡಾ॥ ಈಶ್ವರ ಮಂಟೂರ ಇವರು ಶ್ರೀಮಠದ ಬೃಹತ್ ಸೇವಾ ಕಾರ್ಯವನ್ನು ನೋಡಿ ಅವರು ಹೇಳುವ ಹೃದಯ ಪೂರ್ವಕ ಅನಿಸಿಕೆ ಎಷ್ಟು ಅನ್ವಯವಾಗಿದೆ ನೋಡಿ:

**ನಿಸ್ವಾರ್ಥ ಸೇವೆಯದು ಬಹು ಹಿರಿಯ ವ್ರತವು।**
**ಪಾರಮಾರ್ಥವೆ ಇಲ್ಲಿ ನಡೆದಿಹುದು ದಿಟವು।**
**ಜೀವ, ಜೀವರ ಸೇವೆ ಅದು ದೇವಪೂಜೆ॥**

ಪೂಜ್ಯರ ಮಹಾನ್ ಸೇವಾ ಕಾರ್ಯದ ಬಗ್ಗೆ ಅವರದೇ ನುಡಿನಮನ ಹೀಗಿದೆ ನೋಡಿ.

**ಸೇವೆಯೆಂಬುದೊಂದು ಸದಾವಕಾಶ ದೊರೆಯುವುದೇ ಪುಣ್ಯ ವಿಶೇಷ।**
**ದೊರೆತುದನು ಬಳಸಿದವ ಧರೆಯೊಳಗೆ ಧನ್ಯ ಧರೆಯೊಳಗೆ ಧನ್ಯ॥**

ಹೀಗೆ ಪೂಜ್ಯ ಮಹಾಸನ್ನಿಧಿಯವರು ನಿಸ್ವಾರ್ಥಸೇವೆಯ ಮೂಲಕ ಧನ್ಯರಾಗಿದ್ದಾರೆ. ಮಣ್ಣನ್ನು ಹೊನ್ನಾಗಿಸಿದ ತಪೋಮೂರ್ತಿಯಾಗಿ ಮನುಕುಲಕ್ಕೆ ಆದರ್ಶ ಮಠಾಧಿಪತಿಗಳಾಗಿದ್ದಾರೆ. ಅದು ಅದ್ಭುತವೇ ಆಗಿದೆ ಅಲ್ಲವೇ ?



## ಗುರುವನ್ನು ನಮಿಸೋಣ ಬನ್ನಿ

ಶತಮಾನದ ಯುಗ ಮುನಿಗೆ ನಾಡನಾರಿಯರ ನಮನ
ಕನ್ನಡದ ಯುಗ ಪುರುಷ ಸಿದ್ಧಯತಿಗೆ ನಮಿಸೋಣ ಬನ್ನಿ,
ಗುರುಕರುಣೆಯ ರಸವಾಹಿನಿ ಇಲ್ಲಿ ಹರಿದು ಬಂದಿದೆ,
ಈ ಭಕ್ತಿ ರಸಗಂಗೆಯಲ್ಲಿ ಮೀಯೋಣ ಬನ್ನಿ
ನಮ್ಮ ಭಕ್ತಿಯ ಪುಷ್ಪಾಂಜಲಿಯನ್ನು ಸಲ್ಲಿಸೋಣ ಬನ್ನಿ
ಸಿದ್ಧಗಂಗೆಯ ಸಿದ್ಧಪುರುಷನಿಗೆ ನಮಿಸೋಣ ಬನ್ನಿ ॥

ಗುರುಕಾರುಣ್ಯದ ಅಮೃತಬಿಂದು ತುಂಬಿದೆ ಇಲ್ಲಿ
ಜಾತಿ ಮತ ಪಂಥಗಳನ್ನು ಮೆಟ್ಟಿನಿಂತ ಗಟ್ಟಿ ಗುರುವಿಗೆ
ಮಂತ್ರ ಶಕ್ತಿಯಿಂದ ಮನುಕುಲವನ್ನು ಉದ್ಧರಿಸಿದ ದೈವಕ್ಕೆ
ನಮ್ಮೆಲ್ಲರ ಭಾವ ತುಂಬಿದ ಹರಕೆಯನ್ನು ಸಲ್ಲಿಸೋಣ ಬನ್ನಿ ॥

ಸಹಸ್ರ ಸಹಸ್ರ ಕಂದಮ್ಮಗಳಿಗೆ ಉಣಬಡಿಸಿದ ದಾಸೋಹಿಗೆ
ಸರಸ್ವತಿಯ ಒಲುಮೆಯನ್ನು ಬಿತ್ತಿದ ಮಹಿಮಗೆ
ಸಾಮೂಹಿಕ ಪ್ರಾರ್ಥನೆಗೆ ಶಕ್ತಿಕೊಟ್ಟ ಯತಿಗೆ
ಕಾಯಕ ಹಿರಿಮೆ ಗರಿಮೆಗಳ ಖಣಿಗೆ ನಮಿಸೋಣ ಬನ್ನಿ ॥

ಸಿದ್ಧಗಂಗೆಗೆ ಹೋದವರು ಧನ್ಯರು
ದಾಸೋಹ ಸವಿದವರು ಅಜರಾಮಜರು
ಸಿದ್ಧಗಂಗೆಯ ಕೀರ್ತಿ ಹರಿದು ಬಂದಿದೆ ಇಲ್ಲಿ
ನಡೆದಾಡುವ ವಿಶ್ವರೂಪ ದೇವರಿಗೆ ನಮಿಸೋಣ ಬನ್ನಿ ॥

**ಡಾ. ಲೀಲಾದೇವಿ ಆರ್. ಪ್ರಸಾದ್**
ಮಾಜಿ ಸಚಿವೆ,
ನಂ. ೬೪, ೧ನೇ ಮುಖ್ಯರಸ್ತೆ,
ಲೋಯರ್ ಪ್ಯಾಲೇಸ್ ಆರ್ಚಿಡ್
ಬೆಂಗಳೂರು-೫೬೦ ೦೦೩







ಲೇಖನ

# ಅನುಭಾವ ಕವಿ ನಿಜಗುಣ ಶಿವಯೋಗಿಗಳು

– ಎಚ್.ಎಸ್. ಸಿದ್ಧಗಂಗಪ್ಪ *



ಭೂಲೋಕದಲ್ಲಿ ಅನ್ಯಾಯ, ಅಧರ್ಮ, ಅನೀತಿ, ಅಪ್ರಾಮಾಣಿಕತೆ, ವಂಚನೆ, ಮೊದಲಾದ ದುಷ್ಟಶಕ್ತಿಗಳು ವಿಜೃಂಭಿಸತೊಡಗಿ ಸಮಾಜದ ಸುಸ್ಥಿತಿಗೆ ಭಂಗ ಉಂಟಾದಾಗ, ಭಗವಂತನು ವಿಭೂತಿ ಪುರುಷನನ್ನು ಕಳುಹಿಸಿ ಜನತೆಯಲ್ಲಿ ಕವಿದಿದ್ದ ಕಾರ್ಮೋಡವನ್ನು ಸರಿಸಿ ಬೆಳಕನ್ನು ನೀಡಿ ಅವರು ನೆಮ್ಮದಿಯ ಜೀವನ ನಡೆಸುವಂತಾಗಲು ದಾರಿದೀಪವಾಗುವಂತೆ ಮಾಡಿದ್ದಾನೆ. ಕರ್ನಾಟಕದಲ್ಲಿ ಇಂಥ ಅನೇಕ ಜನ ವಿಭೂತಿ ಪುರುಷರು ಅವತರಿಸಿ ಜನರಲ್ಲಿ ನೆಮ್ಮದಿಯ ಬದುಕಿನ ಭರವಸೆಯ ಬೆಳಕನ್ನು ನೀಡಿದ್ದಾರೆ. ಅವರಲ್ಲಿ ನಿಜಗುಣರೂ ಒಬ್ಬರು. ನಿಜಗುಣರದು ಬಹುಮುಖಿ ವ್ಯಕ್ತಿತ್ವವುಳ್ಳ ಪ್ರತಿಭೆ. ಅವರು ಒಬ್ಬ ಶ್ರೇಷ್ಠ ಶಿವಯೋಗಿಗಳಾಗಿ, ಅನುಭಾವಿಗಳಾಗಿ, ಸಂಗೀತಜ್ಞರಾಗಿ, ಸಾಹಿತಿಗಳಾಗಿ ಕಂಗೊಳಿಸಿದ್ದಾರೆ.

ಜನರಲ್ಲಿ ಮನೆ ಮಾಡಿಕೊಂಡಿದ್ದ ಅಂಧಕಾರವನ್ನು ಕಳೆದು ಅವರಲ್ಲಿ ಸುಜ್ಞಾನದ ಜ್ಯೋತಿಯನ್ನು ಹೊತ್ತಿಸಿ, ಸನ್ಮಾರ್ಗದಲ್ಲಿ ನಡೆಯಲು ಮಾರ್ಗದರ್ಶನ ನೀಡಿದ ಅನುಭಾವಿ ನಿಜಗುಣರ ಬಗ್ಗೆ ಹಲವಾರು ಕಥೆಗಳು ಪ್ರಚಲಿತವಿದೆ. ಕಥೆಯೊಂದರ ಪ್ರಕಾರ ನಿಜಗುಣರು ಕರ್ನಾಟಕದ ಒಂದು ಸಣ್ಣ ಪ್ರಾಂತ್ಯಕ್ಕೆ ಬಹುಶಃ ರಾಜರು ಅಥವಾ ಪಾಳೇಗಾರರಾಗಿದ್ದವರು, ರಾಜತ್ವವನ್ನು ತ್ಯಜಿಸಿ ತೀವ್ರ ವೈರಾಗ್ಯ ಪರರಾಗಿ ಆಧ್ಯಾತ್ಮಿಕ ಮಹಾಸಾಮ್ರಾಜ್ಯದ ಚಕ್ರವರ್ತಿಗಳಾಗಿ ಪರಿವರ್ತಿತರಾದರು. ಅವರು ಹಾಗೆ ರಾಜ್ಯವನ್ನು ತ್ಯಜಿಸಿ ವೈರಾಗ್ಯ ಮೂರ್ತಿಗಳಾಗಲು ಕಾರಣವಾದ ಘಟನೆ ಹೀಗಿದೆ. ಒಮ್ಮೆ ಶಿವನು ಜಂಗಮ ವೇಷದಲ್ಲಿ ಬಂದು ಭಿಕ್ಷೆ ಕೇಳಲು, ರಾಣಿಯು ನಾಳೆ ಬಾ ಎನ್ನುತ್ತಾಳೆ. ಈ ಸಂಗತಿಯನ್ನು ತಿಳಿದ ನಿಜಗುಣರಲ್ಲಿ ವೈರಾಗ್ಯ ಉದಯಿಸಿ ಅರಮನೆಯನ್ನು ತ್ಯಜಿಸಿ ಹೊರಡುತ್ತಾರೆ. ಹಾಗೆ ಅವರು ಸಂಚಾರ ಮಾಡುತ್ತಾ ಮೈಸೂರು ಜಿಲ್ಲೆ, ಕೊಳ್ಳೇಗಾಲ ತಾಲ್ಲೂಕಿಗೆ ಸೇರಿದ ಶಂಭುಲಿಂಗನ ಬೆಟ್ಟಕ್ಕೆ ಬಂದು ಶಂಭುಲಿಂಗ ಗುರುವಿನ ಉಪದೇಶಾಮೃತ ಪಡೆಯುತ್ತಾರೆ. ಗುರುಗಳು ನಿಜಗುಣರನ್ನು ವೇಶ್ಯೆಯೊಬ್ಬಳ ಬಳಿ ಒತ್ತೆಯಿಟ್ಟು ಆಕೆಯ ಸೇವೆಯನ್ನು ತಾನು ಹಿಂತಿರುಗುವವರೆಗೂ ಮಾಡಿಕೊಂಡಿರುವಂತೆ ಆದೇಶಿಸಿ ದೇಶ ಸಂಚಾರಕ್ಕೆ ಹೊರಡುತ್ತಾರೆ. ಗುರುಗಳ ಆದೇಶದಂತೆ ನಿಜಗುಣರು ಆಕೆಯ ಸೇವೆಯೇ ಗುರುಸೇವೆ ಎಂದು ಭಾವಿಸಿ ಸೇವೆ ಮಾಡುತ್ತಿದ್ದರು. ಆಕೆ ಒಡ್ಡಿದ ಆಮಿಷಗಳಿಗೆ ತುತ್ತಾಗದೆ ನಿಷ್ಕಾಮಿಯಾಗಿ ತನ್ನತನವನ್ನು ಉಳಿಸಿಕೊಳ್ಳುತ್ತಾರೆ. ಪ್ರಭುದೇವರಂತೆ ಮಾಯೆಯನ್ನು ಗೆದ್ದ ವೈರಾಗ್ಯಮೂರ್ತಿಯಾಗುತ್ತಾರೆ.

ಮತ್ತೊಂದು ಕಥೆಯ ಪ್ರಕಾರ ಧಾರವಾಡ ಜಿಲ್ಲೆಯ ಶಿವಯೋಗಾಶ್ರಮದಲ್ಲಿ ದೊರೆತ ಹಸ್ತಪ್ರತಿಯಲ್ಲಿ 'ಸಹಸ್ರಾಕ್ಷ'ನೆಂಬ ರುದ್ರನು ಶಿವನ ಅಪ್ಪಣೆಯಂತೆ ಭೂಲೋಕದಲ್ಲಿ ನಿಜಗುಣ ರಾಜನೆಂಬ ಹೆಸರಿನಲ್ಲಿ ಶಂಭುಲಿಂಗನ ಬೆಟ್ಟದ ಸುತ್ತಲ ಪ್ರದೇಶವನ್ನು ಆಳುತ್ತಿದ್ದನು. ಒಂದು ದಿನ ರಾಣಿಯು ಜಂಗಮರನ್ನು ಉದಾಸೀನದಿಂದ ಕಾಣಲು ಇದರಿಂದ ಬೇಸತ್ತ ನಿಜಗುಣರು ವೈರಾಗ್ಯ ತಳೆದು ಸಂಸಾರ ನಶ್ವರವೆಂದು ಭಾವಿಸಿ ದೇಶ ಸಂಚಾರ ಹೊರಟರು. ಹಾಗೆ ದೇಶ ಸಂಚಾರ ಮಾಡುತ್ತಾ ಬುಡಕೇರಿ ಪಟ್ಟಣದ ಭುಜಲಿಂಗಸ್ವಾಮಿಗಳ ಶಿಷ್ಯನಾಗಲು ಅವರ ಮಠದ ಮುಂದೆ ಮೂರು ದಿವಸ

---

* ೧೬೧೭, ಮಾತೃಶ್ರೀ, ಸರ್ ಎಂ.ವಿ. ಮುಂದುವರೆದ ಬಡಾವಣೆ, ೮ನೇ ಬ್ಲಾಕ್, ಸ್ಫೂರ್ತಿಧಾಮದ ಎದುರು, ಮುದ್ದಿನಪಾಳ್ಯ ಮುಖ್ಯರಸ್ತೆ, ಬೆಂಗಳೂರು-೯೧ ಮೊ: ೯೮೪೫೫ ೬೫೮೭೧







ಉಪವಾಸವ್ರತ ಕೈಗೊಂಡರು. ಇವರ ನಿಷ್ಠೆ, ಭಕ್ತಿಗೆ ಸುಪ್ರೀತರಾದ ಗುರುಗಳು ಶಂಭುಲಿಂಗನ ಬೆಟ್ಟದಲ್ಲಿ ಅಷ್ಟಾಂಗ ಯೋಗ ಅಭ್ಯಾಸದಲ್ಲಿ ನಿರತರಾಗುವಂತೆ ಅಪ್ಪಣೆ ಮಾಡಿದರು. ಅವರ ಆದೇಶದಂತೆ ನಿಜಗುಣರು ಶಿವಯೋಗವನ್ನು ಅನುಷ್ಠಾನ ಕೈಗೊಂಡು ಸಿದ್ಧಿ ಪಡೆದು ಅನೇಕ ಪವಾಡಗಳನ್ನು ಮೆರೆದರು.

ಆದರೆ, ಅವರ ಕಾಲದ ಬಗ್ಗೆ ವಿದ್ವಾಂಸರಲ್ಲಿ ಒಮ್ಮತ ಅಭಿಪ್ರಾಯ ಮೂಡಿಬಂದಿಲ್ಲ. ಕಾಲದ ಬಗ್ಗೆ ಶ್ರೀ ಗಂಗಾಧರ ಮಡಿವಾಳೇಶ್ವರ ತುರಮುರಿ, ಬುದ್ಧಯ್ಯ ಸ್ವಾಮಿ ಪುರಾಣಿಕ, ಡಾ. ಶಿ.ಚಿ. ನಂದೀಮಠ, ಮಧುರಚೆನ್ನ, ಹಲಸಂಗಿ, ಟಿ.ಎಚ್.ಎಂ. ಸದಾಶಿವಯ್ಯನವರು, ಆರ್. ನರಸಿಂಹಾಚಾರ್ಯ, ಇ.ಪಿ. ರೈಸ್, ಡಾ. ರಂ.ಶ್ರೀ. ಮುಗಳಿ, ಪಿ.ಆರ್. ಕರಿಬಸವಶಾಸ್ತ್ರಿಗಳು, ಬಿ. ಶಿವಮೂರ್ತಿ ಶಾಸ್ತ್ರಿಗಳು, ಡಾ. ಕೇತಕರ್, ಡಾ. ಎಚ್. ತಿಪ್ಪೇರುದ್ರಸ್ವಾಮಿ ತಮ್ಮ ತಮ್ಮ ಅಭಿಪ್ರಾಯಗಳನ್ನು ಮಂಡಿಸಿದ್ದಾರೆ. ಇವರೆಲ್ಲರ ಅಭಿಪ್ರಾಯಗಳನ್ನು ಗಮನಿಸಿದಾಗ ೧೦ನೇ ಶತಮಾನದಿಂದ ೧೮ನೇ ಶತಮಾನದ ನಡುವೆ ಓಡಾಡುತ್ತಿರುವುದು ಕಂಡುಬರುತ್ತದೆ. ಡಾ. ಎಚ್. ತಿಪ್ಪೇರುದ್ರಸ್ವಾಮಿಗಳವರು ಅಭಿಪ್ರಾಯಪಡುವಂತೆ ಸುಮಾರು ೧೫ನೇ ಶತಮಾನವೆಂದಿಟ್ಟು ಕೊಳ್ಳಬಹುದು.

ಕರ್ನಾಟಕ ಆಧ್ಯಾತ್ಮಿಕ ಪರಂಪರೆಯಲ್ಲಿ ನಿಜಗುಣರ ಸಾಧನೆ ಮತ್ತು ಸಿದ್ಧಿಗಳು ಒಂದು ವಿಶಿಷ್ಟವಾದ ಘಟ್ಟ. ಷಟ್‌ಶಾಸ್ತ್ರಗಳೆಂದು ಪ್ರಸಿದ್ಧವಾದ ಆರು ಗ್ರಂಥಗಳನ್ನು ಅವರು ಕನ್ನಡದಲ್ಲಿ ಬರೆದಿದ್ದಾರೆ. 'ಅನುಭವಸಾರ', 'ಪರಮಾರ್ಥ ಗೀತೆ', 'ಪರಮಾನುಭವ ಬೋಧೆ', 'ಕೈವಲ್ಯ ಪದ್ಧತಿ', 'ಪರಮಾರ್ಥ ಪ್ರಕಾಶಿಕೆ' ಮತ್ತು 'ವಿವೇಕ ಚಿಂತಾಮಣಿ' ಇವುಗಳು ಅವರು ರಚಿಸಿದ ಆರು ಗ್ರಂಥಗಳು. ಇವುಗಳಲ್ಲಿ ಕೊನೆಯ ಎರಡು ಗದ್ಯಕೃತಿಗಳು. ಅದರಲ್ಲಿ ವಿವೇಕ ಚಿಂತಾಮಣಿಯಂತೂ ಅವರ ಅದ್ವಿತೀಯ ವಿದ್ವತ್ತಿಗೆ ದ್ಯೋತಕವಾಗಿದೆ. ನಿಜಗುಣರು ಗ್ರಂಥದಲ್ಲಿ ಕನ್ನಡಕ್ಕೆ ಮೊಟ್ಟಮೊದಲನೆಯ ವಿಶ್ವಕೋಶವನ್ನು ಕೊಡುವ ಪ್ರಾಮಾಣಿಕ ಪ್ರಯತ್ನ ಮಾಡಿದ್ದಾರೆ. ಗ್ರಂಥದ ಕೊನೆಯಲ್ಲಿ ಸುಮಾರು ೧೬೦೦ ಗ್ರಂಥಗಳನ್ನು ನೋಡಿ ಅವುಗಳಿಂದ ವಿಷಯವನ್ನು ಸಂಗ್ರಹಿಸಿ ಈ ಗ್ರಂಥವನ್ನು ರಚಿಸಿರುವುದಾಗಿ ಹೇಳಿಕೊಂಡಿದ್ದಾರೆ.

'ಪರಮಾನುಭವ ಬೋಧೆ' ಸಾಂಗತ್ಯದಲ್ಲಿ ರಚಿತವಾದ ಕೃತಿ, ಯಾಜ್ಞವಲ್ಕ್ಯ ಮತ್ತು ಮೈತ್ರೇಯಿಯರ ಸಂಭಾಷಣೆಯ ರೂಪದಲ್ಲಿದೆ. ಈ ಕೃತಿಯಲ್ಲಿ ಆತ್ಮ ವಿಚಾರವನ್ನು ತುಂಬಾ ಅರ್ಥಪೂರ್ಣವಾಗಿ, ಮನೋಜ್ಞವಾಗಿ ನಿರೂಪಿಸಲಾಗಿದೆ. ಇದರಲ್ಲಿ ಪ್ರವರ್ತಕರ್ಮ, ನಿವರ್ತಕರ್ಮ, ಭ್ರಾಂತಿ ನಿರಾಕರಣ, ನಿಜಗುಣಯೋಗ, ಸಗುಣಯೋಗ, ಗುರುಶಿಷ್ಯರ ಲಕ್ಷಣಗಳನ್ನು ವಿವರಿಸಲಾಗಿದೆ. 'ಪರಮಾರ್ಥಗೀತೆ'ಯನ್ನು ರಗಳೆಯಲ್ಲಿ ಬರೆದಿದ್ದು, ಗುರುಶಿಷ್ಯರ ಸಂವಾದ ರೂಪದಲ್ಲಿದೆ. ಇದು ಲಲಿತ ರಗಳೆಯಲ್ಲಿದ್ದು, ಯೋಗವಾಸಿಷ್ಠ ಗ್ರಂಥದ ವಿಷಯವನ್ನು ನಿರೂಪಿಸಲಾಗಿದೆ. ಇದರಲ್ಲಿ ಸೃಷ್ಟಿಕ್ರಮ, ಆತ್ಮನ ನಿಜಸ್ವರೂಪ, ತತ್ತ್ವಜ್ಞಾನ, ಜೀವನ್ಮುಕ್ತನ ಲಕ್ಷಣಗಳನ್ನು ವಿವರಿಸಲಾಗಿದೆ.

'ಅನುಭಾವಸಾರ' ತ್ರಿಪದಿಯಲ್ಲಿ ರಚಿತವಾಗಿದೆ. ಇದರಲ್ಲಿ ಸಕಲ ಉಪನಿಷತ್ತುಗಳ ಸಾರವನ್ನು ಸಂಗ್ರಹವಾಗಿ ಹೇಳಿದ್ದಾರೆ. ಇದು 'ಗುರು-ಶಿಷ್ಯ', ಸಂವಾದ ರೂಪದಲ್ಲಿದೆ. ಈ ಕೃತಿಯಲ್ಲಿ ಚಿದ್ವಿವರ್ತಸ್ವರೂಪ ನಿರ್ಣಯ, ಜೀವೇಶ್ವರ ಸ್ವರೂಪ ನಿರ್ಣಯ, ಭೇದ ನಿರಾಕರಣ, ಅನಾತ್ಮಕತ್ವ ನಿರಾಕರಣ, ಚಿದಚಿದ್ವಿವೇಕ, ಬಂಧಮುಕ್ತಿ ಲಕ್ಷಣ, ಜೀವನ್ಮುಕ್ತರ ಚಾರಿತ್ರ್ಯ ಆನಂದಾವಿರ್ಭಾವ, ಇತ್ಯಾದಿ ವಿಷಯಗಳನ್ನು ವಿವರಿಸಲಾಗಿದೆ. 'ಪರಮಾರ್ಥ ಪ್ರಕಾಶಿಕೆ' ಚನ್ನಸದಾಶಿವಯೋಗಿಗಳ 'ಶಿವಯೋಗ ಪ್ರದೀಪಿಕೆ'ಯ ಆಧಾರದ ಮೇಲೆ ರಚಿತವಾದ ಗದ್ಯಗ್ರಂಥ. ಇದರಲ್ಲಿ ಹಠ, ರಾಜಯೋಗ ಮೊದಲಾದವುಗಳನ್ನು ಪ್ರಸ್ತಾಪಿಸಿ ಈ ಎಲ್ಲಾ ಯೋಗಗಳಿಗಿಂತ ಶಿವಯೋಗವು ಹೆಚ್ಚಿನದು, ವಿಶಿಷ್ಟವಾದುದು ಎಂಬುದನ್ನು ಪ್ರತಿಪಾದಿಸಲಾಗಿದೆ.

'ವಿವೇಕ ಚಿಂತಾಮಣಿ' ಸಕಲ ಶಾಸ್ತ್ರಗಳ ಪಾಠವನ್ನು ಸಂಗ್ರಹಿಸಿದ ಗ್ರಂಥ. 'ಜ್ಞಾನಕೋಶ' ಎಂಬ ಹೆಗ್ಗಳಿಕೆಗೆ ಪಾತ್ರವಾಗಿದೆ. ಈ ಗ್ರಂಥ ಮರಾಠಿ ಹಾಗೂ ಸಂಸ್ಕೃತ ಭಾಷೆಗಳಿಗೆ ಅನುವಾದಗೊಂಡಿದೆ. ಈ ಗ್ರಂಥದ ಮಹತ್ವವನ್ನು ಕುರಿತು ಇ.ಪಿ. ರೈಸ್ ಅವರು "His best known work is the Viveka Chintamani, a very useful encyclopaedia of Sanskrit terms and Veerashaiva Lore" ಎಂದು ಅಭಿಪ್ರಾಯಪಟ್ಟಿದ್ದಾರೆ. ವಿಶ್ವ ವಿಷಯಗಳ ಸುಸ್ಥಿತಿಯನ್ನು ಸವಿವರವಾಗಿ







ವರ್ಣಿಸುವ ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಮೊಟ್ಟ ಮೊದಲನೆ ವಿಶ್ವಕೋಶ ಇದಾಗಿದೆ.

'ಕೈವಲ್ಯ ಪದ್ಧತಿ' ನಿಜಗುಣ ಶಿವಯೋಗಿಗಳ ಒಂದು ಅಪೂರ್ವ ವಿಶಿಷ್ಟವಾದ ಅನುಭಾವ ಗೀತೆಗಳ ಸಂಕಲನ. ಕಾಲ ಕಾಲಕ್ಕೆ ಅಂತರಂಗದಿಂದ ಹೊರಹೊಮ್ಮಿದ ಅನುಭಾವ ರೂಪವಾದ ಗೀತೆಗಳನ್ನು ಇದರಲ್ಲಿ ಅಳವಡಿಸಿದ್ದಾರೆ. ಭಾವಗಳಿಗೆ ಅನುಗುಣವಾಗಿ ವಿವಿಧ ರಾಗಗಳಲ್ಲಿ ಇಲ್ಲಿನ ಹಾಡುಗಳು ಮೂಡಿ ಬಂದಿವೆ. ಈ ದೃಷ್ಟಿಯಿಂದ ಇದು ಕರ್ನಾಟಕ ಸಂಗೀತ ಶಾಸ್ತ್ರಜ್ಞರಿಗೂ ಬಹುಮುಖ್ಯವಾದ ಆಕರ ಗ್ರಂಥವಾಗಿದೆ. ನಿಜಗುಣರ ಅನುಭಾವದ ಆಳ, ಅಗಲ, ಎತ್ತರ ಬಿತ್ತರಗಳ ಅಪೂರ್ವ ಸಿದ್ಧಿಯನ್ನು ಅನುಭವ ವೇದ್ಯವಾಗಿಸುವ ಈ ಅಮೂಲ್ಯ, ಅಪರೂಪದ ಕೃತಿ ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಒಂದು ಹೊಸ ಪ್ರಕಾರವೊಂದಕ್ಕೆ ನಾಂದಿಯಾಯಿತು. ಈ ಗ್ರಂಥದಲ್ಲಿ ಮುಕ್ತಿ ಸೋಪಾನಗಳಾದ ಶಿವಕಾರುಣ್ಯ ಸ್ಥಲ, ಜೀವ ಸಂಭೋದನ ಸ್ಥಲ, ನೀತಿ ಕ್ರಿಯಾಚರ್ಯ ಸ್ಥಲ, ಯೋಗ ಪ್ರತಿಪಾದನಾ ಸ್ಥಲ ಮತ್ತು ಜ್ಞಾನ ಪ್ರತಿಪಾದನಾ ಸ್ಥಲದ ಬಗ್ಗೆ ವಿವರಣೆಯಿದೆ. ಇಲ್ಲಿ 'ಸ್ಥಲ' ಎನ್ನುವ ಮಾತನ್ನ ಇಟ್ಟುಕೊಂಡಿದ್ದರೂ ಭಕ್ತ, ಮಹೇಶ, ಪ್ರಸಾದ, ಪ್ರಾಣಲಿಂಗಿ, ಶರಣ, ಐಕ್ಯ, ಈ ಆರು ಸ್ಥಲಗಳಿಂದ ಭಿನ್ನವಾಗಿದೆ ಎಂದು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ಆದರೆ, ಅಲ್ಲಿನಂತೆಯೇ ಸಾಧಕನ ವಿಕಾಸದ ವಿವಿಧ ಹಂತಗಳನ್ನು ಮತ್ತು ಆಯಾ ಹಂತದ ಅಗತ್ಯಗಳನ್ನು ಈ ಕೃತಿಯಲ್ಲಿಯೂ ಅಳವಡಿಸಲಾಗಿದೆ.

ತತ್ತ್ವಪದಗಳ ದೃಷ್ಟಿಯಿಂದ 'ಕೈವಲ್ಯ ಪದ್ಧತಿ' ಒಂದು ಅಪೂರ್ವ ಗ್ರಂಥ. ಈ ತತ್ತ್ವಪದಗಳ ಪರಂಪರೆ ನಿಜಗುಣರ ಅನಂತರವೂ ಬೆಳೆದುಬಂದಿತು. ಸ್ವಲ್ಪ ಹೆಚ್ಚು ಕಡಿಮೆ ಇವರ ಸಮಕಾಲೀನರೆಂದು ಹೇಳಬಹುದಾದ ಮುಪ್ಪಿನ ಷಡಕ್ಷರಿಗಳು, ಚಿದಾನಂದ ಅವಧೂತರು, ಸರ್ಪಭೂಷಣ ಶಿವಯೋಗಿಗಳು, ಈಚಿನ ಬಾಲಲೀಲಾ ಮಹಾಂತ ಶಿವಯೋಗಿಗಳು, ಮೈಲಾರ ಬಸವಲಿಂಗ ಶರಣರು, ಕಡಕೋಳದ ಮಡಿವಾಳ ಯೋಗಿ, ಕೂಡಲೂರೇಶ, ನಿಂಬರಗಿ ಮಹಾರಾಜ, ಶಂಕರಾನಂದ, ಶಿಶುನಾಳ ಷರೀಫ್ ಮೊದಲಾದವರಿಂದ ತತ್ತ್ವಪದಗಳ ಪರಂಪರೆ ವಿಪುಲವಾಗಿ ಬೆಳೆದವು. ಇವರೆಲ್ಲರ ಅಪೂರ್ವವಾದ ಸಾಧನೆಗಳಿಂದ 'ಕೈವಲ್ಯ ಪದ್ಧತಿ' ಸ್ವತಂತ್ರವಾಗಿ ಪರಿಶೀಲಿಸಬಲ್ಲ ಒಂದು ವಿಶಿಷ್ಟವಾದ ಸಾಹಿತ್ಯ ಪ್ರಕಾರವಾಗಿ ಬೆಳೆಯುವಂತಾಯಿತು.

ನಿಜಗುಣ ಶಿವಯೋಗಿಗಳು ಪೂರ್ವಾಶ್ರಮದಲ್ಲಿ ಒಬ್ಬ ರಾಜನಾಗಿ ವೈಭೋಗದ ಸಕಲ ಸಂಪತ್ತನ್ನು ಅನುಭವಿಸುತ್ತಾ ಲೌಕಿಕ ಪ್ರಪಂಚದಲ್ಲಿ ತಮ್ಮನ್ನು ತಾವೇ ಮರೆತಿದ್ದರು. ಅವರ ಮನಸ್ಸಿನಲ್ಲಿ ನಡೆದ ಜಿಜ್ಞಾಸೆ, ಸಂಶಯ, ಸಂದೇಹಗಳಿಗೆ ಗುರುಗಳಿಂದ ಸೂಕ್ತ ಉತ್ತರ ಮಾರ್ಗದರ್ಶನ ದೊರೆತು ಲೌಕಿಕ ಜೀವನದಿಂದ ಅಲೌಕಿಕ ಜೀವನದತ್ತವಾಲಿದರು. "ಶಿವಪಥವನರಿವಡೆ ಗುರುಪಥವೇ ಮೊದಲು" ಎಂಬ ಬಸವಣ್ಣನವರ ನುಡಿಯನ್ನು ಸಾಕಾರಗೊಳಿಸುವ ದೃಷ್ಟಿಯಿಂದ ನಿಜಗುಣರು ತಮ್ಮ ಗುರುಗಳಾದ ಶ್ರೀ ಶಂಭುಲಿಂಗಸ್ವಾಮಿಗಳವರ ಮಾರ್ಗದರ್ಶನದಲ್ಲಿ ಅರಿವಿನ ಜ್ಯೋತಿಯನ್ನು ಹೊತ್ತಿಸಿಕೊಂಡು, ಆ ದಿವ್ಯಪ್ರಭೆಯ ಬೆಳಕಿನಲ್ಲಿ ತಮ್ಮ ಸಾಧನೆಯ ಮೆಟ್ಟಿಲುಗಳನ್ನು ಏರತೊಡಗಿದರು. ಸಂಪೂರ್ಣವಾಗಿ ಬಂಧನದಿಂದ ಬಿಡುಗಡೆಯಾಗಲು ಅವರ ಮನಸ್ಸು ಪರಿಪಕ್ವವಾಗಲಿಲ್ಲ. ಮನಸ್ಸು ಒಂದು ರೀತಿಯಲ್ಲಿ ಗೊಂದಲಗಳ ಗೂಡಾಯಿತು. ತಮ್ಮ ಮನಸ್ಸಿನ ತಳಮಳವನ್ನು ಗುರುಗಳ ಬಳಿ ಹೋಗಿ "ಗುರುಗಳೆ ಏನು ಮಾಡಲಿ, ನಾನು ಸಂಸಾರವನ್ನು ತ್ಯಾಗ ಮಾಡಬೇಕೆಂದರೂ, ಸಂಸಾರ ನನ್ನನ್ನು ಬಿಡುತ್ತಿಲ್ಲ" ಎಂದು ನಿವೇದಿಸಿಕೊಂಡರು. ಗುರುಗಳು ಅವರ ಮನಸ್ಸನ್ನು ಪರಿವರ್ತನೆ ಮಾಡಬೇಕೆಂದು ಚಿಂತಿಸಿ, ಒಮ್ಮೆ ಊರ ಮುಂದಿರುವ ಮರವನ್ನು ತಬ್ಬಿಕೊಂಡು ನಿಂತುಬಿಟ್ಟರು. ರಾಜಗುರುಗಳ ಈ ವಿಚಿತ್ರ ವರ್ತನೆಯನ್ನು ಕಂಡು ಜನ ನಿಜಗುಣರಲ್ಲಿ ಹೋಗಿ ನಡೆದ ವಿಚಾರವನ್ನು ತಿಳಿಸಿದರು. ನಿಜಗುಣರು ಬಂದು ಗುರುಗಳ ವರ್ತನೆಯನ್ನು ನೋಡಿ ಗುರುಗಳನ್ನು ಉದ್ದೇಶಿಸಿ 'ಏನು ಗುರುಗಳೇ ಹೀಗೆ ನಿಂತಿರುವಿರಿ?' ಎಂದು ಕೇಳಿದರು. ಅದಕ್ಕೆ ಗುರುವು ಇದರಲ್ಲಿ ಆಶ್ಚರ್ಯಪಡುವಂತಹದು ಏನೂ ಇಲ್ಲ. ಈ ಸಂಸಾರ ನಿನ್ನನ್ನು ಹಿಡಿದುಕೊಂಡು ಹೇಗೆ ಬಿಡುತ್ತಿಲ್ಲವೋ, ಹಾಗೆ ಈ ಮರವು ನನ್ನನ್ನು ಹಿಡಿದುಕೊಂಡು ಬಿಡುತ್ತಿಲ್ಲ ಎಂದರು. ಗುರುಗಳ ಈ ಮಾತಿನ ಹಿಂದೆ ಇರುವ ಮರ್ಮ ನಿಜಗುಣರ ಮನಸ್ಸಿಗೆ ನಾಟಿತು. ಮನಸ್ಸಿನಲ್ಲಿ ವಿದ್ಯುತ್

ಸಂಚಾರವಾದಂತೆ ಆಯಿತು. ಆಧ್ಯಾತ್ಮಿಕ ಜಗತ್ತಿನಲ್ಲಿ ತೊಡಗಿಸಿಕೊಳ್ಳಲು ಮಾರ್ಗದರ್ಶನ ಮಾಡಿ ಉದ್ಧರಿಸಿದ ಗುರುಗಳಿಗೆ ಭಕ್ತಿಯಿಂದ ನಮಿಸಿದರು. ಮನದಲ್ಲಿ ಕವಿದಿದ್ದ ಸಂಸಾರವೆಂಬ ಕತ್ತಲೆಯನ್ನು ಓಡಿಸಿ ಜ್ಞಾನಜ್ಯೋತಿಯ ಮುಂಬೆಳಕಿನಲ್ಲಿ ಪರಮ ವೈರಾಗ್ಯಮೂರ್ತಿಗಳಾಗಿ ರೂಪುಗೊಂಡರು.

ನಿಜಗುಣ ಶಿವಯೋಗಿಗಳ ಅನುಭಾವ ಗೀತೆಗಳು ಮಾನವತೆಯ ಉನ್ನತಿಗೆ ಮಾರ್ಗದರ್ಶನ ನೀಡುವ ಅಮೃತಧಾರೆಯಾಗಿವೆ. ಅವರ ಒಂದೊಂದು ನುಡಿಗಳು ಮಾನವನ ಒಳಿತಿಗೆ ಸಹಕಾರಿಯಾಗಿವೆ.

**ಎಲ್ಲರೊಡನೆ ವೈರ್ಯವಿಲ್ಲದೆ ಕೂರ್ಪುದೆ । ಚಂದಮಮ ।**
**ತಲ್ಲಣಿಸದೆ ನೀತಿಯಲ್ಲಿರಲಾರ್ಪುದೆ ? ಚಂದಮಮ ॥ಪ॥**

ಎಂಬ ಅವರ ಗೀತೆ ಈ ಜಗತ್ತಿನಲ್ಲಿದ್ದೂ ಇಲ್ಲದಂತೆ, ಒಂದು ರೀತಿಯಲ್ಲಿ ತಾವರೆ ಎಲೆಯ ಮೇಲೆ ಬಿದ್ದ ಇಬ್ಬನಿ ಹನಿಯಂತೆ, ಬಾಳುವ ನೈತಿಕ ಜೀವನದ ರಹಸ್ಯವನ್ನು ಬೆಳಸಿಕೊಂಡು ಹೋಗಿದೆ. ಮತ್ತೊಂದು ಹಾಡಿನಲ್ಲಿ ಇಹ-ಪರಗಳ ಸಮನ್ವಯ ಸಾಧನೆಯನ್ನು ಬಹುಸುಂದರವಾಗಿ ಚಿತ್ರಿಸಿದ್ದಾರೆ.

**ಜಾಣನು ಲೌಕಿಕ ಪರಮಾರ್ಥವೆರಡನು ।**
**ಮಾಣದೆ ಕೂಡಿ ನಡುಸುತಿಹನಿಂತು ॥ಪ॥**
**ತರುಣಿಯ ಮೊಲೆಯೊಂದನುಣುತಲುಣುಗನನ್ನ ।**
**ಕರದೊಳುಳಿದ ಕುಚಾಗ್ರವನೋಡುವಂತೆ ॥**
**ನರಜನ್ಮವಿಡಿದಿಹ ಭೋಗಾನುಭವದೊಳು ॥**
**ಪರಲೋಕಗತಿಯ ಸಾಧನದೊಳೊಂದಿಹನು ॥ ೧ ॥**

ಜ್ಞಾನವೇ ಜೀವನಕ್ಕೆ ಸಾರ್ಥಕತೆಯನ್ನು ತಂದು ಕೊಡುವ ಚೈತನ್ಯಶಕ್ತಿ. ಜ್ಞಾನದ ಬೆಳಕಿನಲ್ಲಿ ಜೀವನವನ್ನು ಆಧ್ಯಾತ್ಮಿಕತೆಯ ಕಡೆ ಕೊಂಡೊಯ್ಯಬಹುದು. ಜ್ಞಾನದ ಮಹತ್ವವನ್ನು ಅನೇಕ ಹಾಡುಗಳಲ್ಲಿ ಅಭಿವ್ಯಕ್ತಪಡಿಸಿದ್ದಾರೆ. ಜ್ಞಾನ ಸೂರ್ಯನ ಮುಂದೆ ಆಗಮ ಪುರಾಣಾದಿಗಳಲ್ಲಿ ಹೇಳಿದ ಕರ್ಮಗಳು ಜೊಳ್ಳು. ಶರಣರು ಹೇಳುವಂತೆ 'ನುಚ್ಚುತೌಡು ಕಾಣಿಭೋ" ಅವು ಚಿತ್ರದ ರೂಹು, ಚಿತ್ರದ ಕಬ್ಬು, ಅಪ್ಪಿದಡೆ ಸುಖವಿಲ್ಲ, ಮೆಲಿದರೆ ರುಚಿಯಿಲ್ಲ.

**"ಆಗಮ ಪುರಾಣ ವೇದಪೂಗದೊಳು ವಿಧಿಸಿದ ।**
**ಯಾಗ ದಾನ ಜಪ ನೀತಿ ಯೋಗ ಪೂಜಾದಿಗಳು ॥**
**ಈಗ ಜ್ಞಾನೋದಯ ಮಾತ್ರವಾಗಲದರೊಳು ಕೋಟಿ ।**
**ಬಾಗೆಯೊಳೊಂದಕ್ಕೆ ಸಮವಾಗುತಿರುವದರಿಂದ ॥ ೧ ॥**

**ತನುವ ದಂಡಿಸಬೇಡ । ಮನವ ನಿಲ್ಲಿಸಬೇಡ ।**
**ಧನವ ನೀಗಿರಬೇಡ ಮನೆಮಾರು ತೊರೆದು ॥**
**ವನವಾಸಬೇಡ ತನಗಿನಿತು ತತ್ತ್ವಜ್ಞಾನ ಸಂ ।**
**ಜನಿಸಲದಘವೆಲ್ಲವನು ಕೆಡಿಪುದರಿಂದ" ॥ ೨ ॥**

ಆದರೆ ಮೇಲೆ ಹೇಳಿದ ಈ ಎಲ್ಲ ಸಾಧನೆ ಬೇಡವೆಂದಲ್ಲ. ಅವೆಲ್ಲಾ ತಮಗೆ ತಾವೇ ಇಲ್ಲ, ಕೇವಲ ಯಾಂತ್ರಿಕವಾಗಿ ಜಡವಾಗಬಹುದಾದ ಅವುಗಳಿಗೆ ಜೀವಂತಿಕೆಯನ್ನು, ಬದುಕಿಗೊಂದು ಅರ್ಥವಂತಿಕೆಯನ್ನು ತಂದುಕೊಡುತ್ತದೆ ಜ್ಞಾನ. ಜ್ಞಾನವನ್ನು ಕುರಿತು ನಿಜಗುಣ ಶಿವಯೋಗಿಗಳು ಹೀಗೆ ಹೇಳುತ್ತಾರೆ.

**"ಜ್ಞಾನವೇ ಮುಕ್ತಿಗೆ ಮಾರ್ಗವೇನು ಬೇರೊಂದಿಲ್ಲವೆಂದು ।**
**ಮಾನನಿಧಿಯಾದ ಶ್ರುತಿನಾನ್ಯಃ ಪಂಥವೆನಲು**
**ನೀನಿದನೆ ಬಿಡದಿರನೂನ ಶಂಭುಲಿಂಗದ ಸು ।**
**ಜ್ಞಾನ ದೃಢಮಾಗೆ ಪರಮಾನಂದವಹುದರಿಂದ" ॥ ೩ ॥**

ಸಾಧನೆಗೆ ಶಿಖರಪ್ರಾಯವಾಗಿರುವ ಜ್ಞಾನದ ಮಹತ್ವವನ್ನು ನಿಜಗುಣರಿಗೆ ಎಷ್ಟು ಹೇಳಿದರೂ ತೃಪ್ತಿಯಿಲ್ಲ.

ಭಗವಂತನೊಂದಿಗೆ ಜೀವಾತ್ಮವೂ ತನ್ನ ಅಂತರಂಗದ ಮೂಲಕ ನಿವೇದನೆ ಮಾಡುವ ಕ್ರಿಯೆಯನ್ನು ಕೋಗಿಲೆಯನ್ನು ಪ್ರತಿಮೆಯಾಗಿ ಬಳಸಿರುವುದು ಕಾವ್ಯ ಕ್ಷೇತ್ರದಲ್ಲಿ ಒಂದು ವಿಶಿಷ್ಟವಾದ ವಿಧಾನ. ನಿಜಗುಣರು ಕೋಗಿಲೆಯನ್ನು ಕುರಿತು ಹಾಡುವ ಹಾಡು ಅದ್ಭುತವಾಗಿದೆ.

**"ಕೋಗಿಲೆ ಚಿಲ್ವ ಕೋಗಿಲೆ ಮುದ್ದು**
**ಕೋಗಿಲೆ ಜಾಣ ಕೋಗಿಲೆ ॥ ಪ ॥**
**ಹಿಂದೆ ತಪದೋಳೀಶನನೊಂದಿರುತಿರಲೆಚ್ಚು**
**ಬೆಂದ ಕಾಮನ ಬಿಟ್ಟು ಕೋಗಿಲೆ ।**
**ಬಂದು ಬೇಗದಿ ಬಾಲೇಂಧುದರನ ಕೂಡಿ**
**ಕುಂದದೆ ನೀ ಬಾಳು ಕೋಗಿಲೆ ॥ ೧ ॥**
**ಮನಮುನಿಗಳ ನೀತಿಯನು ಕೆಡಿಸುವ ದುಷ್ಟ**
**ಮನಸಿಜನನು ಮೀರಿದ ಕೋಗಿಲೆ**



**ಘನ ಪದವನು ತನ್ನ ನೆನೆವರಿಗೊಲಿದೀವ**
**ಧನದ ಮಿತ್ರನ ಸಾರು ಕೋಗಿಲೆ ॥ ೨ ॥**

**ನಲ್ಲರನಗಲಿದ ಮಲ್ಲಿದೆಯರಕೊಲ್ವ**
**ಫುಲ್ಲಶರನ ಪಿಂಗಿ ಕೋಗಿಲೆ**
**ಎಲ್ಲ ಜೀವರಿಗೆರವಿಲ್ಲದೊಲವನೀವ**
**ಒಲ್ಲಭನೊಳಿರು ಕೋಗಿಲೆ ॥ ೩ ॥**
**ಮಂಗಳರವದೊಳನಂಗನ ಬಣ್ಣಿಸೆ**
**ಭಂಗವಲ್ಲವೆ ನೋಡು ಕೋಗಿಲೆ**
**ಕಂಗೊಳಿಸುವ ಸರ್ವಮಂಗಳೆಯರಸನ**
**ಪಿಂಗದೆ ನೀ ಪಾಡು ಕೋಗಿಲೆ ॥ ೪ ॥**
**ದುರುಳ ಕಂತುವಿನೊಡನಿರೆ ಲೋಕದೊಳು ನಿನ್ನ**
**ಪರಪುಟ್ಟನೆಂಬರು ಕೋಗಿಲೆ**
**ಧರೆಗೆ ಜನಕನಾದ ಗುರು ಶಂಭುಲಿಂಗನ**
**ಚರಣ ಪಲ್ಲವ ಪಿಡಿ ಕೋಗಿಲೆ ॥ ೫ ॥**

ಈ ಹಾಡು ಕಾವ್ಯ ಪ್ರಪಂಚದಲ್ಲೇ ವಿಶಿಷ್ಟ ಹಾಗೂ ವಿನೂತನವಾದುದು ಎಂದು ವಿದ್ವಾಂಸರು ಅಭಿಪ್ರಾಯ ಪಟ್ಟಿದ್ದಾರೆ.

ನಿಜಗುಣ ಶಿವಯೋಗಿಗಳು ಕೈವಲ್ಯ ಸಾಹಿತ್ಯವನ್ನು ನೀಡುವುದರ ಮೂಲಕ ಆಧ್ಯಾತ್ಮಿಕ ಪ್ರಪಂಚದಲ್ಲಿ ಮೇರು ಶಿಖರದಂತಿದ್ದಾರೆ. ಅವರು ಭಾವುಕ ಭಕ್ತಿ ಪ್ರಧಾನವಾದ ಆವೇಗವನ್ನು, ಸಾಮಾಜಿಕ ನೀತಿ ಪ್ರತಿಪಾದಕವಾದ ಉಪದೇಶಗಳನ್ನು ಅರಗಿಸಿಕೊಂಡು ಅಂತರಂಗದಲ್ಲಿ ಇಳಿಯುತ್ತಾ ಆ ಮೂಲಕ ಶಿವಯೋಗ ಸಾಧನೆಯ ಶಿಖರವನ್ನು ಏರುತ್ತಾ ಹೋಗುವ ಅನುಭಾವದ ಆಧ್ಯಾತ್ಮ ಗೀತೆಗಳು ಇಲ್ಲಿನ ಅನುಭವ ಭಕ್ತಿ ಬೌದ್ಧಿಕವಾದ ವಿವೇಚನೆಯಿಂದ ಪರಿಣತಗೊಂಡದ್ದು. ಇಲ್ಲಿ ಬುದ್ಧಿ ಮತ್ತು ಭಾವಗಳೆರಡೂ ಸೇರಿ ಹೃದಯವಂತಿಕೆ ಅಂತರ್ ದರ್ಶನದಿಂದ ಶ್ರೀಮಂತವಾದಾಗ ಅನುಭಾವಕ್ಕೆ ಬೆಲೆ ಬರುತ್ತದೆ. ಶ್ರೀ ಆರ್.ಡಿ. ರಾನಡೇ ಅವರು ಅನುಭಾವಿಗಳ ಲಕ್ಷಣಗಳನ್ನು ಕುರಿತು ಚರ್ಚಿಸುತ್ತಾ ಕೆಲವು ಮುಖ್ಯ ಅಂಶಗಳನ್ನು ಗಮನಿಸಿದ್ದಾರೆ. ಅವರು ಅನುಭಾವಿಯ ಮೊದಲನೆಯ ಅವಶ್ಯಕತೆಯನ್ನು ಹೀಗೆ ವಿವರಿಸಿದ್ದಾರೆ.

"Hence intellectual power and absolute clarity of Thought seem to be the criterion of mystical Experience."

ಬೌದ್ಧಿಕ ವಿವೇಚನೆ ಮತ್ತು ಆಲೋಚನೆ ಸ್ಪಷ್ಟತೆ ಇವು ಅನುಭಾವದ ಮೂಲ ಅವಶ್ಯಕತೆಗಳು. ಇದರ ಜೊತೆಗೆ ಭಾವನಾ ಸಂಪತ್ತು ಅನುಭಾವಿಗೆ ತುಂಬಾ ಅವಶ್ಯಕ. ಆದರೆ ಅದು ಸಾಂಪ್ರದಾಯಿಕವಾದ ಆವೇಗವಾಗಲೀ ಉದ್ರೇಕವಾಗಲೀ ಅಲ್ಲ; ಬುದ್ಧಿಯ ಬೆಳಕನ್ನು ನಡೆಯುವ ಉದಾತ್ತ ಭಾವನೆ, ಕಾನಡೆ ಅವರು ತಮ್ಮ ಅಭಿಪ್ರಾಯವನ್ನು ಮುಂದುವರಿಸುತ್ತಾ ಹೀಗೆ ಹೇಳಿದ್ದಾರೆ.

"A mystical life so far from being unemotional, is, we must say, supermely emotional; only emotion ought to be exercised and kept under control by intellect."

ಎನ್ನುವ ಮಾತು ಗಮನಾರ್ಹವಾದದ್ದು. ಇದರ ಜೊತೆಗೆ ಇನ್ನೂ ಒಂದು ಅಂಶವನ್ನು ರಾನಡೆಯವರು ಗಮನಿಸಿದ್ದಾರೆ. ಆದೆಂದರೆ ನೈತಿಕ ಮತ್ತು ಸಾಮಾಜಿಕ ಜೀವನನ್ನು ಕುರಿತದ್ದು, ಅನುಭಾವಿ ಇವುಗಳಿಗೆ ಹೊರತಾದ ತೀರಾ ವೈಯಕ್ತಿಕ ಜೀವನನ್ನು ಬಾಳುವಂತಿಲ್ಲ. ವ್ಯಕ್ತಿಯಾಗಿ ಆತ ನೈತಿಕ ನಿಷ್ಠೆಯಿಂದ ಕೂಡಿದ ಮತ್ತು ಸಾಮಾಜಿಕ ಹಿತಕ್ಕೆ ಸಹಾಯಕವಾದ ಜೀವನವನ್ನುಳ್ಳವ ನಾಗಬೇಕು.

ಕೈವಲ್ಯ-ಸಾಹಿತ್ಯದ ಆದ್ಯಪ್ರವರ್ತಕರಾದ ನಿಜಗುಣ ಶಿವಯೋಗಿಗಳು ಈ ಎಲ್ಲವನ್ನು ಪೂರ್ಣಪ್ರಮಾಣದಲ್ಲಿ ಪಡೆದ ಮಹಾನುಭಾವಿಗಳು. ಅವರಿಂದ ಮೂಡಿ ಬಂದ ಈ ಸಾಹಿತ್ಯ ತನ್ನ ಪ್ರಾರಂಭದ ದೆಸೆಯಲ್ಲಿಯೇ ಔನ್ನತ್ಯದ ಶಿಖರಕ್ಕೇರಿರುವುದು ಕಾಣುತ್ತದೆ. ಇದು ಎಲ್ಲಿಯೋ ಹುಟ್ಟಿ ಕ್ರಮೇಣ ಬೆಳೆಯುತ್ತಾ ಬಂದಂತೆ ತೋರುವುದಕ್ಕೆ ಬದಲಾಗಿ ಎತ್ತಿಕೊಳ್ಳುತ್ತಲೇ-ಗೌರಿಶಂಕರದ ತುದಿಯಲ್ಲಿ ಸೆಲೆಯೊಡೆದು ಆ ಮಟ್ಟದಲ್ಲಿಯೇ ಭೋರ್ಗರೆದು ಹರಿಯುತ್ತಾ ಕೆಳಗೆ ಬಂದಂತೆ ಅನಿಸುತ್ತದೆ ಎಂಬ ಹಿರಿಯ ವಿದ್ವಾಂಸರಾದ ಡಾ. ಎಚ್. ತಿಪ್ಪೇರುದ್ರಸ್ವಾಮಿಗಳವರ ಅಭಿಪ್ರಾಯ ಮೌಲಿಕವಾದುದು.

ಮಂಗಳ ಗೀತೆಗಳ ಸಮುದಾಯದಲ್ಲಿ ನಿಜಗುಣರ 'ಜ್ಯೋತಿ ಬೆಳಗುತಿದೆ' ಗೀತೆ ಅದ್ವಿತೀಯವಾಗಿ ಪರಿಣಮಿಸಿದೆ. ಡಾ. ಎಚ್. ತಿಪ್ಪೇರುದ್ರಸ್ವಾಮಿಗಳು ಅಭಿಪ್ರಾಯ ಪಡುವಂತೆ "ಕೇವಲ ಜ್ಞಾನದ ಮಹಾಸೌಧಕ್ಕೆ ಹೊಂಗಳಶ ದಂತೆ ಕಂಗೊಳಿಸುತ್ತಿದೆ". ಈ ಗೀತೆ ಕೇವಲ ಭಾವುಕರು ಹಾಡುವ ಮಂಗಳಾರತಿ ಮಾತ್ರವಲ್ಲ ಅದು ಒಂದು







ಕಡೆಯಲ್ಲಿ ಸಮಗ್ರ ಆಧ್ಯಾತ್ಮಿಕ ಸಾಧನೆಯ ವೈಚಾರಿಕ ನಿಲುವನ್ನು, ಇನ್ನೊಂದು ಕಡೆಯಲ್ಲಿ ಮಾತಿಗೆ ಮೀರಿದ ಅನುಭಾವವನ್ನು ಮಾತುಗಳಲ್ಲಿ ಹಿಡಿದಿಡುವ ಸಾಹಸದ ಸಾಹಿತ್ಯ ಪ್ರತಿಭೆಯನ್ನು ಏಕಕಾಲದಲ್ಲಿ ಅಳವಡಿಸಿ ಕೊಂಡಿದೆ. **"ಮಾತೆಂಬುದು ಜ್ಯೋತಿರ್ಲಿಂಗ"** ಎಂಬ ಅಲ್ಲಮಪ್ರಭುವಿನ ಮಾತಿನ ಸಾರ್ಥಕತೆಯನ್ನು ಇಂತಹ ಕಡೆಗಳಲ್ಲಿ ಕಾಣಬಹುದಾಗಿದೆ.

**ಜ್ಯೋತಿ ಬೆಳಗುತಿದೆ ನಿರ್ಮಲ ಪರಂಜ್ಯೋತಿ ಬೆಳಗುತಿದೆ।**
**ಮಾತು ಮನಗಳಿಂದತ್ತ ಮೀರಿದ ।**
**ಸಾತಿಶಯದ ನಿರುಪಾಧಿಕ ನಿರ್ಮಲ । ಜ್ಯೋತಿ**
**ಬೆಳಗುತಿದೆ ॥ ಪ ॥**

ಇಲ್ಲಿ ಮುಖ್ಯವಾಗಿ ಗಮನಿಸಬೇಕಾದುದು, ಈ ಪಲ್ಲವಿಯಲ್ಲಿ ಬರುವ ಎರಡನೆ ಸಾಲು ಮಾತು ಮನಗಳಿಂದತ್ತತ್ತ ಮೀರಿ ನಿರಂತರವಾಗಿ ಪ್ರಜ್ವಲವಾಗಿ ಬೆಳಗುತ್ತಿರುವ ಈ ಪವಿತ್ರವಾದ ನಿರ್ಮಲ ಜ್ಯೋತಿ ಯಾವುದು' ಅದರ ಬೆಳಕಿನ ಪರಿಣಾಮವೇನು? ಅದರ ಆತ್ಯಂತಿಕ ನಿಲುಗಡೆ ಎಲ್ಲಿ ಎಂಬುದನ್ನು ಅಂತರನುಭವದ ದೀಪ್ತಿಯ ಬೆಳಕಿನಿಂದ ಹೊಳೆಯಿಸಿ ತೋರಿಸಿದ್ದಾರೆ.

**ಶಿವಧರ್ಮನಾಳವೆಂತೆಂಬ ಕಂಭದ ಮೇಲೆ ।**
**ಸುವಿವೇಕ ಹೃದಯಾಬ್ಜ ಪಣತೆಯೊಳು ॥**
**ಸವೆಯದ ಸದ್ಭಕ್ತಿರಸತೈಲ ತೀವಿದ ।**
**ಪ್ರವಿಮಲ ಕಳೆಯೆಂಬ ವತ್ತಿಹಿಡಿದು ದಿವ್ಯ ॥ ೧ ॥**

ಇದು ಸಾಧಕನ ಜೀವನದಲ್ಲಿ ಬೆಳಗುತ್ತಿರುವ ಅಂತರಂಗದ ಜ್ಯೋತಿಯೆಂಬುದನ್ನು ಈ ಮಾತುಗಳು ಅರ್ಥಪೂರ್ಣವಾಗಿ ಅಭಿವ್ಯಕ್ತಿಗೊಳಿಸುತ್ತವೆ. ಶಿವಧರ್ಮನಾಳವೆಂಬ ಕಂಭ, ಅದರ ಮೇಲೆ ಸುವಿವೇಕದಿಂದ ಕೂಡಿದ ಹೃದಯ ಕಮಲವೇ ಹಣತೆ, ಅದಕ್ಕೆ ಎಂದೆಂದೂ ಮುಗಿಯದಂತಹ ಸದ್ಭಕ್ತಿರಸವೆಂಬ ನಿರ್ಮಲ ತೈಲ, ಪ್ರವಿಮಲವಾದ ಕಳಾಶಕ್ತಿಯೇ ಈ ಬೆಳಗುತ್ತಿರುವ ದಿವ್ಯಜ್ಯೋತಿಯ ಬತ್ತಿ. ಇದರಿಂದ ಹೊರಹೊಮ್ಮುವ ಬೆಳಕು ಎಂತಹುದೆಂಬುದನ್ನು ಮುಂದೆ ಹೇಳಿದ್ದಾರೆ.

**ಮುಸುಕಿದ ವಿಷಯ ಪತಂಗ ಬಿದ್ದುರುಳಿತಾ ।**
**ಮಸಬುದ್ಧಿಯೆಂಬ ಕತ್ತಲೆಯಳಿಯೆ ।**
**ಮಸಗಿ ಸುಜ್ಞಾನವೆಂಬಂತೆಂಬ ಮಹಾಪ್ರಭೆ ।**
**ಪಸರಿಸಿ ಮಾಯಾಕಾಳಿಕೆ ಪೊರ್ದದನುಪಮ ॥ ೨ ॥**

ಇಲ್ಲಿ ಬೆಳಕಿನ ಪರಿಣಾಮವನ್ನು ವಿವರಿಸಲಾಗಿದೆ. ಮನಸ್ಸನ್ನು ಆವರಿಸಿದ ವಿಷಯವೆಂಬ ಪತಂಗ. ಈ ಬೆಳಕಿನ ಜ್ವಾಲೆಗೆ ಸಿಕ್ಕಿಬಿದ್ದು ಉರುಳುತ್ತದೆ. ತಮ್ಮ ಅಂತರಂಗದಲ್ಲಿ ಆವರಿಸಿರುವ ತಾಮಸ ಬುದ್ಧಿ ಎಂಬ ಕತ್ತಲೆಯನ್ನು ಈ ಬೆಳಕು ಕರಗಿಸುತ್ತದೆ. ಕತ್ತಲೆ ಆವರಿಸಿದ್ದ ಸ್ಥಳದಲ್ಲಿ ಸುಜ್ಞಾನವೆಂಬ ಮಹಾಪ್ರಭೆ ದಟ್ಟವಾಗಿ ಪಸರಿಸುತ್ತದೆ. ಮಾಯಾ ಕಾಣಿಕೆಯನ್ನು ಅಂಟಿಸಿಕೊಳ್ಳದ ಅನುಪಮ ಪರಿಣಾಮವನ್ನು ಅದು ಬೀರುತ್ತದೆ. ಕೈವಲ್ಯ ಮಾರ್ಗದ ಆದ್ಯಂತವೂ ಅದು ವ್ಯಾಪಿಸುತ್ತದೆ. ಮುಂದಿನದು ಇದರ ಆಚೆಯ ನಿಲುವು, ತಾನೇ ತಾನಾದ ಅಖಂಡವಾದ ಪ್ರಜ್ವಲ ಜ್ಯೋತಿ.

**ಪ್ರಣವಾಕಾರದ ಗುಣ ಮೂರು ಮುಟ್ಟದ ।**
**ಗಣನೆಗತೀತಾರ್ಥವೆನೆ ತೋರುವ ॥**
**ಅಣುಮಾತ್ರ ಚಲನೆಯಿಲ್ಲದ ಮೋಕ್ಷಚಿಂತಾ ।**
**ಮಣಿಯೆನಿಸುವ ಶಂಭುಲಿಂಗವೆ ತಾನಾದ ॥ ೩ ॥**

ಪ್ರಣವಾಕಾರದ ಜ್ಯೋತಿ ಎಂಬ ಮಾತು ನಮ್ಮ ಇಡೀ ಆಧ್ಯಾತ್ಮಿಕ ಅನುಭವದ ತಾತ್ವಿಕ ಹಿನ್ನೆಲೆಯನ್ನು ಸಾಂಕೇತಿಕವಾಗಿ ಸೂಚಿಸುತ್ತದೆ. "ಓಂಕಾರ" ರೂಪವಾದ ಅದು ನಾದಬ್ರಹ್ಮ ಸ್ವರೂಪವೂ ಅದನ್ನು ಒಳಗೊಂಡ ಸೃಷ್ಟಿಯ ಚರಾಚರಾತ್ಮಕ ಚೇತನದ ಚಿದ್ರೂಪವೂ ಆಗಿದೆ. ಕೊನೆಯಲ್ಲಿ ಶಂಭುಲಿಂಗವೇ ತಾನಾಗಿ ಪರಿಣಮಿಸಿರುವ ಮೋಕ್ಷ ಚಿಂತಾಮಣಿ ಎಂದು ಹೇಳುತ್ತಾರೆ.

ಒಟ್ಟಿನಲ್ಲಿ ಹೇಳುವುದಾದರೆ ನಿಜಗುಣ ಶಿವಯೋಗಿಗಳು ಸಾಹಿತ್ಯದ ಮೂಲಕ ಕನ್ನಡ ಸಾಹಿತ್ಯ ಕ್ಷೇತ್ರವನ್ನು ಶ್ರೀಮಂತಗೊಳಿಸಿದ್ದಾರೆ. ಶೃತಿ, ಸ್ಮೃತಿ, ಪುರಾಣ, ಇತಿಹಾಸಗಳ ಸಾರವನ್ನು ಹೀರಿಕೊಂಡು ಭಕ್ತಿ, ಜ್ಞಾನ, ವಿರಕ್ತಿಗಳನ್ನು ಸಮನ್ವಯಗೊಳಿಸಿ ತಿಳಿಗನ್ನಡದಲ್ಲಿ ಗ್ರಂಥಗಳನ್ನು ರಚಿಸಿ ಕನ್ನಡ ಸಾಹಿತ್ಯ ಲೋಕಕ್ಕೆ ಮಹದುಪಕಾರ ಮಾಡಿದ್ದಾರೆ. ಅನುಭಾವದ ಮಹೋನ್ನತ ಸಾಧನೆಯನ್ನು ಮಾಡಿದ ನಿಜಗುಣರು ಕನ್ನಡಿಗರ ಹೃದಯ ಸಿಂಹಾಸನದಲ್ಲಿ ಶಾಶ್ವತವಾದ ಸ್ಥಾನವನ್ನು ಪಡೆದಿದ್ದಾರೆ.





ನುಡಿನಮನ

# ಲಿಂಗಪೂಜಾಲೀಲಾ ವಿನೋದ ಪರಮಪೂಜ್ಯರು

– ಡಿ.ಬಿ. ಮೃತ್ಯುಂಜಯಪ್ಪ(ಜಯಣ್ಣ) *

ಅಗೋಚರ ಪರವಸ್ತುವು(ಶಿವನು) ತನ್ನ ಅನಂತಲೀಲೆಗಳಿಂದ ಜಗತ್ಕಲ್ಯಾಣವನ್ನು ಮಾಡುತಿಹುದು. ಈ ಶಿವಲೀಲೆಯನ್ನು ಬೇಧಿಸಲಾಗದೆ ಪ್ರಕೃತಿಯ ಲೀಲೆಯನ್ನು ತಿಳಿಯಲು ಸಾಧ್ಯವಿಲ್ಲ ಎನ್ನುತ್ತಾರೆ. ಅಂತೆಯೇ ಪರಮಪೂಜ್ಯರು ಅನುಸರಿಸುತ್ತಾ ಲಿಂಗಪೂಜಾಲೀಲೆಯನ್ನು ವಿವರಿಸಲು ಸಾಧ್ಯವಿಲ್ಲ. ಅವರವರ ಭಾವಕ್ಕೆ ಅವರವರ ಭಕುತಿಗೆ ಅವರವರ ತೆರನಾಗಿ ಇರುತಿಹುರು ಶಿವಯೋಗಿ ಎಂಬ ಶರಣರ ವಾಣಿಯಂತೆ ಪರಮಪೂಜ್ಯರ ಲಿಂಗಾನುಸಂಧಾನದಲ್ಲಿ ನನಗಾದ ಭಾವಾನಂದವನ್ನು ವಿವರಿಸಿದ್ದೇನೆ.

ಪರಮಪೂಜ್ಯರು ಶರಣರು ನಿರೂಪಿಸಿದ ಷಟ್‌ಸ್ಥಲಯುಕ್ತವಾದ ಲಿಂಗಪೂಜಾವಿಧಾನವನ್ನು ಅನುಸರಿಸಿಕೊಂಡು ಬಂದಿದ್ದಾರೆ. ಶ್ರೀಮಠದ ವ್ಯವಹಾರ ಅಗಾಧವಾದುದು. ನಿತ್ಯ ಹತ್ತುಸಾವಿರ ಸಂಖ್ಯೆಮೀರಿ ನಿರಂತರ ದಾಸೋಹ ಸುಲಭದ ಮಾತಲ್ಲ. ವಿದ್ಯಾಸಂಸ್ಥೆಗಳ ವ್ಯವಹಾರವು ಸುಮ್ಮನೆ ಸಾಗುವುದಿಲ್ಲ. ಈ ಎಲ್ಲಾ ವ್ಯವಹಾರಗಳನ್ನು ತಾವು ತೊಟ್ಟಿದ್ದ ಬಟ್ಟೆ ಕಳಚಿಡುವಂತೆ ಮನದಿಂದ ತೆಗೆದಿಟ್ಟು ಪೂಜ್ಯರು ಸ್ನಾನದ ಮನೆಗೆ ಹೊರಡುತ್ತಾರೆ. ಅವರು ಸ್ನಾನದ ಮನೆಗೆ ಬರುವಾಗಲೇ ಶಿವಾಭಾವಪರವಶರಾಗುತ್ತಾರೆ. ಆದಕಾರಣ ಲಿಂಗಪೂಜಾನುಷ್ಠಾನ ಮುಗಿಯುವ ತನಕ ಲೌಕಿಕವಾಗಿ ಒಂದೇ ಒಂದು ಮಾತನಾಡುವುದನ್ನು ನೋಡಿಲ್ಲ. ಸ್ನಾನದ ಮನೆಯಲ್ಲದೆ ಮಜ್ಜನಕ್ಕೆ ಅಣಿ ಮಾಡಿದ ಪಾತ್ರೆಯಲ್ಲಿನ ಜಲಕ್ಕೆ (ನೀರಿಗೆ) ಪ್ರಣವ ಸಂಬಂಧ ಮಾಡುತ್ತಾರೆ. ಪೂಜ್ಯರ ಹಸ್ತಸ್ಪರ್ಶದಿಂದ ಪಾತ್ರೆಯಲ್ಲಿನ ಜಲ ಪವಿತ್ರ ಜಲವಾಗುತ್ತದೆ. ತಮಗೆ ಸಿದ್ಧಪಡಿಸಿದ ಮಣೆಯ ಮೇಲೆ ಪೂಜ್ಯರು ಕುಳಿತುಕೊಳ್ಳುತ್ತಾರೆ. ಶಿಷ್ಯರು ಪೂಜ್ಯರ ಮೇಲೆ ಜಲಧಾರೆ ಎರೆಯುತ್ತಾರೆ. ಶಿವಶಿವನೆನ್ನುತ ಸ್ನಾನಮಾಡಿ ಮಡಿಯುಟ್ಟು ಪೂಜಾ ಗೃಹವನ್ನು ಪ್ರವೇಶಿಸುವವರೆಗೆ ಮೆಲುನುಡಿಯಲ್ಲಿ ಶಿವಶಿವನೆನ್ನುತ್ತ ನಡೆಯುತ್ತಾರೆ. ಪೂಜಾಗೃಹವನ್ನು ಪ್ರವೇಶಿಸಿ ಗದ್ದುಗೆ ಕಂಬಳಿಯ ಮೇಲೆ ಪ್ರಣವಸಂಬಂಧ ಮಾಡಿ ಪತ್ರೆ ಪುಷ್ಪಗಳನ್ನು ಪ್ರಣವದ ಮೇಲಿಟ್ಟು ಗದ್ದುಗೆಯ ಮೇಲೆ ಸಿದ್ಧಾಸನದಲ್ಲಿ ಆಸೀನರಾಗುತ್ತಾರೆ. ಎರಡು ಹಸ್ತಗಳಿಗೆ ಭಸ್ಮಲೇಪನ ಮಾಡಿಕೊಂಡು ಮುಗಿದ ಕೈಯಾಗಿ ನೇತ್ರಗಳನ್ನು ಮುಚ್ಚಿ ದೃಷ್ಟಿಯನ್ನು ಭೂಮಧ್ಯದಲ್ಲಿ (ಆಜ್ಞಾಚಕ್ರ) ನೆಟ್ಟು ಗುರುಧ್ಯಾನ ಮಾಡುತ್ತಾ ಜಗತ್ಕಲ್ಯಾಣದ ಸಂಕಲ್ಪ ಮಾಡುತ್ತಾರೆ. ಅಂತರ್ಮುಖವಾಗಿ ಗುರುಧ್ಯಾನದಲ್ಲಿ ತಲ್ಲೀನರಾದ ಪರಮ ಪೂಜ್ಯರ ವಚನದಲ್ಲಿ ಪ್ರಕಾಶಿಸುವ ಶಿವತೇಜದ ಮುಂದೆ ಪೂಜಾಗೃಹದ ಕತ್ತಲೆಯಲ್ಲಿ ಗದ್ದುಗೆಯ ಬಳಿ ಬೆಳಗುತ್ತಿರುವ



* ಬಸವ ಕುಟೀರ, ದೊಡ್ಡಸಾರಂಗಿ,
ತುಮಕೂರು ತಾ.,

ತೈಲದದೀಪದ ಬೆಳಕು ಮಂದ ಬೆಳಕಾಗಿ ಕಾಣುತ್ತದೆ. ಗುರುಧ್ಯಾನದ ನಂತರ ಪೂಜ್ಯರು ಭಸ್ಮಸ್ನಾನ (ಸರ್ವಾಂಗಕ್ಕೆ ಭಸ್ಮ ಸವರಿಕೊಳ್ಳುವುದು) ಭಸ್ಮಉದ್ಧಾಳನ (ಸರ್ವಾಂಗಕ್ಕೆ ಭಸ್ಮವನ್ನು ಸಿಂಪಡಿಸಿಕೊಳ್ಳುವುದು)ಗಳನ್ನು ಪ್ರಣವೋಚ್ಚರಣೆ ಮೂಲಕ ಮಾಡಿಕೊಳ್ಳುತ್ತಾರೆ. ಕರನ್ಯಾಸ, ಅಂಗನ್ಯಾಸ, ಹೃದಯನ್ಯಾಸ ಮೂಲಕ ಭಸ್ಮದಿಂದ ದೇಹಕ್ಕೆ ಪ್ರಣವ ಸಂಬಂಧವನ್ನು ಮಾಡಿಕೊಳ್ಳುತ್ತಾರೆ. ಭಸ್ಮದ ಗಟ್ಟಿಗೆ ಪ್ರಣವ ಸಂಬಂಧ ಮಾಡಿ ಪೂಜಿಸಿ, ಆ ಪ್ರಣವಪೂರಿತ ಭಸ್ಮವನ್ನು ಮೂರು ಬೆರಳುಗಳಿಂದ ಲಾಲಾಟ ಶಿರಸು ಹೃದಯಭಾವೋಪಾದಗಳಾಗಿ ಸರ್ವಾಂಗಕ್ಕೆ ಭಸ್ಮಧಾರಣೆ ಮಾಡಿಕೊಳ್ಳುತ್ತಾರೆ. ರುದ್ರಾಕ್ಷ ಮಾಲೆಗಳನ್ನು ತೆಗೆದು ಪೂಜಿಸಿ ಕಂಠಮಾಲೆ, ತೋಳು, ಬಾಹು ಕಂಣಾದಿಯಾಗಿ ಸರ್ವಾಂಗಕ್ಕೆ ರುದ್ರಾಕ್ಷ ಮಾಲೆಗಳನ್ನು ಧರಿಸುತ್ತಾರೆ. ಜಪಮಾಲೆಯನ್ನು ಬಲಹಸ್ತದಲ್ಲಿಡಿದು ಅದರ ಮೇಲೆ ಜಪವಸ್ತ್ರವನ್ನು ಮುಚ್ಚಿ ನೇರವಾಗಿ ಕುಳಿತು ಸ್ವಸ್ವರೂಪ ಅನುಸಂಧಾನದಲ್ಲಿ ಮನವನ್ನು ಮಂತ್ರದಲ್ಲಿ ಬೆರೆಸಿ ಜಪಾನುಸಂಧಾನ ನಿರತರಾಗುತ್ತಾರೆ. ಅಂದರೆ ಮಂತ್ರಪೂರಕ ಉಸಿರು ಎಳೆದುಕೊಂಡು ಮಂತ್ರದಲ್ಲಿ ಕುಂಭಕ ಮಾಡಿ, ಮಂತ್ರರೇಚಕ ಮಂತ್ರಪೂರಿತ ಉಸಿರಾಟನೆ ಜಪ. ಪೂಜ್ಯರು ಅಂತರ್ಮುಖ ಮಂತ್ರಾನು ಸಂಧಾನವನ್ನು ನೋಡಿದವರಿಗೆ ಶಿವನ ಧ್ಯಾನಮೂರ್ತಿಯನ್ನು ಕಂಡ ಅನುಭವವಾಗುವುದು. ಪೂಜ್ಯರು ಮಂತ್ರದ ದಿವ್ಯಪ್ರಭೆಯಲ್ಲಿ, ಭಸ್ಮದ ರೇಖೆಗಳ ತಳದಲ್ಲಿ ರುದ್ರಾಕ್ಷ ಮಾಲೆಗಳ ಶೋಭೆಯಿಂದ ಶಿವಯೋಗಿಗಳು ಶಿವಸ್ವರೂಪದಲ್ಲಿಯೇ ಪ್ರಕಾಶಿಸುವವರು. ಶಿವನಿಗೂ ತಾರತಮ್ಯವಿಲ್ಲವೆಂಬುದು ಶರಣರವಾಣಿ.

ಲಿಂಗಪೂಜೆಗೆ ತನುಮನಭಾವಗಳ ಶುದ್ಧ ಮಾಡಿಕೊಂಡು ಮಂತ್ರಮಯಮನರಾಗಿ ಲಿಂಗಪೂಜೆಗೆ ಅಣಿಯಾ ಗುವರು. ವಾಮಹಸ್ತದಲ್ಲಿ ಪಂಚಕೋನವನ್ನು ಬರೆದು ಅದರಲ್ಲಿ ಪ್ರಣವಗಳ ಲಿಖಿಸಿ ಪೂಜೆಗೆ ಲಿಂಗಯ್ಯನನ್ನು ಪೂಜೆಗೆ ಕರೆತರಲು ಕರಡಿಗೆಯ ಮುಚ್ಚಳ ತೆಗೆದು ಮೃದುವಸ್ತ್ರದ ಮಧ್ಯೆ ಹುದುಗಿರುವ ಲಿಂಗಯ್ಯನಿಗೆ ನಮಿಸಿ ಸಂಕ್ಷೇಪ ಅರ್ಚನೆ ಮಾಡಿ ಭಕ್ತಿಭಾವದಿಂದ ಕರಡಿಗೆಯಿಂದ ತೆಗೆದು ವಾಮಹಸ್ತದ ಪ್ರಣವಪೀಠದಲ್ಲಿಡುವರು. ಲಿಂಗಸೋಂಕಿನಿಂದ ಪುಳಕಿತರಾದ ಅಂಗವ ನೋಡುತ್ತಾನಂದಿಸುತ್ತಾ ಷೋಡಷೋಪಚಾರಕ್ಕೆ ಅಣಿಯಾಗುತ್ತಾರೆ. ಪೂಜ್ಯರ ಪೂಜೆಗೆ ಅಣಿ ಮಾಡಿದ ಶಿಷ್ಯರುಗಳು ಪೂಜ್ಯರು ಪೂಜಾಗೃಹ ಪ್ರವೇಶಿಸಿದಾಗಿನಿಂದ ಸ್ವರಬದ್ಧವಾಗಿ ಶ್ರೀ ರುದ್ರ ನಮಕ, ಬಮಕ, ಪರುಷ ಸೂಕ್ತಿಗಳನ್ನು ಹೇಳುತ್ತಿರುತ್ತಾರೆ. ಲಿಂಗಯ್ಯನಿಗೆ ಜಲಾಧಿ ಅಭಿಷೇಕಗಳು ಸಾಂಗವಾದ ಮೇಲೆ ಮೃದು ಮಡಿ ವಸ್ತ್ರದಿಂದ ಲಿಂಗಯ್ಯನ ಅಭಿಷೇಕ ಜಲ ನಿರ್ಮೂಲನ ಮಾಡಿ ವಾಮಹಸ್ತದ ಪ್ರಣಪೀಠದಲ್ಲಿರಿಸಿ ಭಸ್ಮಗಂಧಾಕ್ಷತೆಗಳಿಂದ ಅಲಂಕರಿಸುತ್ತಾರೆ. ತಮ್ಮ ಭಕ್ತಿ ಭಾವನೆಗಳಲ್ಲಿ ಪತ್ರೆ ಪುಷ್ಪಗಳ ಮೂಲಕ ಲಿಂಗಯ್ಯನ ಸುತ್ತ ಅಲಂಕರಿಸುತ್ತಾರೆ. ತ್ರಿಗುಣರಹಿತ ಬಿಲ್ವದಳಗಳು, ಎನಗಿಂತ ಕಿರಿಯರಿಲ್ಲ, ಶಿವಭಕ್ತರಿಗಿಂತ ಹಿರಿಯರಿಲ್ಲವೆಂಬ ತುಂಬೆ ಹೂಗಳು ಸುಗಂಧಭರಿತ ಶಿವಚರಿತ್ರೆ ಉಳ್ಳ ಮಲ್ಲಿಗೆ ಜಾಜಿ, ಸಂಪಿಗೆ ಹೂಗಳು, ಮರುಗಪುಷ್ಪ, ಕಗ್ಗರ್ಲೆ ಪತ್ರೆಗಳು, ಪೂಜ್ಯ ಕರದಲ್ಲಿನ ಲಿಂಗಯ್ಯನ ಸುತ್ತ ಅಲಂಕಾರಗೊಂಡು ನಮ್ಮ ಜನ್ಮಸಾರ್ಥಕವೆನ್ನುತ್ತವೆ. ಸುಗಂಧ ಧೂಪವ ಬೀಸಿ, ನಿರ್ಮಲಜ್ಯೋತಿಯ ಬೆಳಗುತ್ತ ಶಿಷ್ಯರೊಡಗೂಡಿ, ಸ್ತೋತ್ರಗೀತೆಗಳ ಪಾಡುತ್ತಾ ಲಿಂಗಯ್ಯನ ನೋಡುತ್ತಾ ಪೂಜ್ಯರು ಮಾಡುವ ಲಿಂಗಪೂಜೆಯ ಮಾಟದಲ್ಲಿ ಪರಶಿವನ ದಿವ್ಯದರ್ಶನವಾಗಿರುತ್ತದೆ. ಲಿಂಗಯ್ಯನಿಂದ ಶೋಭಿ ಸುತ್ತಿರುವ ವಾಮಹಸ್ತವನ್ನು ನೇತ್ರಗಳ ನೇರಕ್ಕೆ ಎತ್ತಿ ಹಿಡಿದು ನೇರವಾಗಿ ಕುಳಿತು ಬಲಹಸ್ತವನ್ನು ಜಪವಸ್ತ್ರದಲ್ಲಿ ಮುಚ್ಚಿ ಕರಜಪ ಮಾಡುತ್ತಾ ಅರ್ಧ ಮುಚ್ಚಿದ ಕಣ್ಣಿನಿಂದ (ಅನಿಮಿಷನೋಟ) ಲಿಂಗಯ್ಯನ ನಿರೀಕ್ಷಿಸುತ್ತ ಶರಣಸತಿ ಭಾವದಲ್ಲಿ ತನ್ನನ್ನೇ ಲಿಂಗಯ್ಯನಲ್ಲಿ ಸಮರ್ಪಿಸಲು ಅನುವಾಗುವರು. ಉಸಿರಾಟದಲ್ಲಿ ಮಂತ್ರಪೂರ್ವಕ ಉಸಿರೆಳೆದುಕೊಂಡು ನಿಧಾನವಾಗಿ ಆಧಾರಚಕ್ರದವರೆಗೆ ಕುಂಬಕಮಾಡಿ ನಿಧಾನವಾಗಿ ಎಳೆದುಕೊಂಡು ಪೂರಕ ಮಂತ್ರಪೂರ್ವಕ ಉಸಿರನ್ನು ಮಂತ್ರ ಪೂರ್ವಕವಾಗಿಯೇ ಸ್ವಾಧಿಷ್ಟಾನ, ಮಣಿಪೂರಕ, ಅನಾಹತ, ವಿಶುದ್ಧಿ ಚಕ್ರಗಳನ್ನು ಬಳಸಿ ಉಸಿರನ್ನು ಬಿಡುವರು(ರೇಚಕ). ಈ ರೀತಿ ಪ್ರಾರಂಭವಾದ ಕರಜಪ ನಿಲುಗಡೆಯಾಗಿ, ಶ್ವಾಸೋಚ್ಛಾಸವೇ ಮಂತ್ರಮಯವಾಗಿ ತನಗೇನು ಅರಿವಿಲ್ಲವಾಗಿ ಸ್ವರಜಪದಲ್ಲಿ ಪೂಜ್ಯರು ತಲ್ಲೀನರಾ ಗುವರು. ಲಿಂಗ ನಿರೀಕ್ಷೆಯ ಪೂಜ್ಯರ ನೇತ್ರಗಳ ಮೂಲಕ ಅಂಗೈಯಲ್ಲಿನ ಲಿಂಗಕಿರಣಗಳು ಅಂತರಂಗವನ್ನು ಪ್ರವೇಶಿಸಿ ಪ್ರಾಣಲಿಂಗ ಪೂಜೆಯಾಗುವುದು.



ದೇಹವು ಲಿಂಗತೇಜದಿಂದ ಮನವು ಮಂತ್ರದಲ್ಲಿ ಲಯವಾಗಿ ಭಾವವು ನಿರ್ಭಾವವಾಗಿ ಭಾವಲಿಂಗ ಸಮರಸದಲ್ಲಿ ಪೂಜ್ಯರು ತನ್ಮಯರಾಗಿ ನಿಸ್ತರಂಗ ಸಾಗರದಂತೆ ನಿಶ್ಚಲ ಲಿಂಗಜ್ಯೋತಿ ರೂಪಿನಿಂದ ಶೋಭಿಸುವರು. ಪೂಜ್ಯರು ಲಿಂಗಯ್ಯನಲ್ಲಿ ಸಮರಸ ಬಯಸಲು ಲಿಂಗಯ್ಯನು ಪೂಜ್ಯರಲ್ಲಿ ಸಮರಸಗೊಂಡು ಭಾವಲಿಂಗ ಪೂಜೆಯಾಗುವುದು. ನಂತರ ಭಕ್ತರಿಂದ ಪೂಜ್ಯರ ಪಾದಪೂಜೆಯಾಗಿ ಪಾದೋದಕ ಪ್ರಸಾದಗಳು ಆವಿರ್ಭವಿಸಿ ಭಕ್ತರನ್ನು ಭವಸಾಗರದಿಂದ ಪಾರು ಮಾಡುವುವು.

**ಪರಮಪೂಜ್ಯರ ಲಿಂಗಾರ್ಚನಾ ಕ್ರಮವು ಷಟ್‌ಸ್ಥಲ ಪೂಜಾಕ್ರಮಕ್ಕೆ ಅನುಗುಣವಾಗಿದೆ,**

೧. ಸ್ನಾನಾದಿಗಳಿಂದ ಭಸ್ಮರುದ್ರಾಕ್ಷಧಾರಣದವರೆಗೆ ಭಕ್ತಸ್ಥಲದ ಶ್ರದ್ಧಾಭಕ್ತಿಯ ಆಚಾರಲಿಂಗ ಪೂಜೆಯಾಗುವುದು.

೨. ಸ್ವಸ್ವರೂಪಧ್ಯಾನದ ಸ್ವರಜಪವು ಮಹೇಶ ಸ್ಥಲದ ನಿಷ್ಠಾಭಕ್ತಿಯ ಗುರುಲಿಂಗಪೂಜೆಯಾಗುವುದು.

೩. ಕರದಲ್ಲಿ ಲಿಂಗವಿಡಿದು ಮಾಡುವ ಪೂಜೆಯು ಪ್ರಸಾದಿ ಸ್ಥಲದ ಅವಧಾನಭಕ್ತಿಯ ಪೂಜೆಯಾಗುವುದು.

೪. ಲಿಂಗಪೂಜಾಕ್ರಿಯೆಗಳನ್ನು ಅನುಭವಿಸುವುದು ಪ್ರಾಣಲಿಂಗಸ್ಥಲದ ಅನುಭವಭಕ್ತಿ ಶಿವಲಿಂಗ ಪೂಜೆಯ ಭಾವಲಿಂಗಾ.

೫. ಶರಣಸತಿ ಲಿಂಗದ ಶಿವಭಾವದಲ್ಲಿ ಶರಣಸ್ಥಲದ ಆನಂದಭಕ್ತಿವಿಡಿದ ಪ್ರಸಾದ.

ಇಷ್ಟಲಿಂಗ ಪೂಜಕ ಪೂಜ್ಯರು ಪೂಜ್ಯ ಇಷ್ಟಲಿಂಗದಲ್ಲಿ ಸಮರಸಗೊಂಡು ಲಿಂಗಾನುಸಮರಸದಲ್ಲಿ ಲಿಂಗಕಳೆಯಿಂದ ಪ್ರಕಾಶಿಸುವುದೇ ಐಕ್ಯಸ್ಥಲದ ಸಮರಸಭಕ್ತಿಯ ಮಹಾಲಿಂಗಾರ್ಚನೆಯ ಮಂಗಳದ ಬೆಳಕಾಗಿಹುದು. ಇದು ಪೂಜ್ಯರ ನಿತ್ಯಲಿಂಗಾರ್ಚನೆಯ ಗೋಪ್ಯತೆಯ ನಿಬ್ಬೆರಗು. ಇದನ್ನು ಅಕ್ಷರಗೊಳಿಸಲು ಸಾಧ್ಯವಿಲ್ಲ. ನೋಡಿ, ಅನುಭವಿಸಿ, ಆನಂದಿಸಿ ಏನೆಂದು ಉಸುರಲಳವಲ್ಲದ ನಿಲುವುದು. ■

## 'ಸಿದ್ಧಗಂಗಾ' ಮಾಸಪತ್ರಿಕೆ ಆಜೀವ ಸದಸ್ಯರಲ್ಲಿ ಮನವಿ

ಶ್ರೀಮಠದ ಮುಖವಾಣಿ ಸಿದ್ಧಗಂಗಾ ಮಾಸಪತ್ರಿಕೆಗೆ ಆಜೀವ ಸದಸ್ಯರಾಗಿರುವುದು ಸಂತೋಷ. ಇದರಿಂದ **'ಸಿದ್ಧಗಂಗಾ'** ನಿರಂತರವಾಗಿ ನಿಮ್ಮ ಮನ-ಮನೆ ಬೆಳಗುತ್ತಲಿದೆ. ತಮಗೆ ಮಠದ ಪರವಾಗಿ ಧನ್ಯವಾದಗಳು.

ಕಾಗದ, ಮುದ್ರಣ, ಅಂಚೆ ವೆಚ್ಚ ಇನ್ನಿತರೆ ವೆಚ್ಚಗಳು ದುಬಾರಿಯಾಗಿದ್ದು, ಪತ್ರಿಕೆ ಮುನ್ನಡೆಸಲು ಕಷ್ಟವಾಗುತ್ತದೆ ಎಂಬುದನ್ನು ತಮ್ಮ ಗಮನಕ್ಕೆ ತರುತ್ತಲೇ ಬರುತ್ತಿದ್ದೇವೆ.

ಪ್ರಾರಂಭಕ್ಕೆ ೫೦೦/- ರೂ, ೧೦೦೦/-ರೂ ಆಜೀವ ಸದಸ್ಯರಾಗಲು ಚಂದಾ ಸಂದಾಯ ಮಾಡಿದ್ದಿರಿ. ಇದರಿಂದ ಬ್ಯಾಂಕ್ ಠೇವಣಿಯಿಂದ ಬರುವ ಬಡ್ಡಿ ಕೇವಲ ೫೦/- ರೂ, ೧೦೦/- ಮಾತ್ರ, ಇಷ್ಟು ಕನಿಷ್ಠ ಹಣದಿಂದ ಪತ್ರಿಕೆ ಮುದ್ರಣ ತೊಡಕಾಗಿ ನಷ್ಟವಾಗುತ್ತಿದೆ. ಪ್ರಯುಕ್ತ ಈ ಆರ್ಥಿಕ ಕೊರತೆಯನ್ನು ದಯವಿಟ್ಟು ಅರ್ಥಮಾಡಿ ಕೊಳ್ಳುವಿರೆಂದು ಭಾವಿಸಿದ್ದೇವೆ.

**ಪ್ರಸ್ತುತ ಆಜೀವ ಚಂದಾ ೨೦೧೪ ವರ್ಷದಿಂದ ೧೫೦೦/- ರೂ ನಿಗದಿ ಮಾಡಿದೆ. ಈ ಮೊತ್ತಕ್ಕೆ ಹೊಂದುವಂತೆ ಹಿಂದೆ ೫೦೦/- ರೂ ಸಂದಾಯ ಮಾಡಿರುವವರು ಬಾಕಿ ೧೦೦೦/- ರೂ ಸಂದಾಯ ಮಾಡಬೇಕು. ೧೦೦೦/- ರೂ ಸಂದಾಯ ಮಾಡಿರುವವರು ಬಾಕಿ ೫೦೦/- ಸಂದಾಯ ಮಾಡಲು ಕೋರಿದೆ.**

ದಯಮಾಡಿ ತಮಗೆ ಅನ್ವಯಿಸುವ ಬಾಕಿ ಚಂದಾ ಮೊತ್ತವನ್ನು ಸಿದ್ಧಗಂಗಾ ಮಾಸಪತ್ರಿಕೆ ಹೆಸರಿನಲ್ಲಿ **ನಗದು/ಚೆಕ್/ಡಿ.ಡಿ.** ಮೂಲಕ ತಪ್ಪದೆ ಪತ್ರಿಕೆ ಆಜೀವ ಸದಸ್ಯತ್ವದ (ಐಒ) ಸಂಖ್ಯೆ ನಮೂದಿಸಿ ದೂರವಾಣಿ/ ಮೊಬೈಲ್ ನಂಬರ್‌ನೊಂದಿಗೆ ಈ ಕೆಳಗಿನ ವಿಳಾಸಕ್ಕೆ ಕಳುಹಿಸಿ ಕೊಡುವುದರ ಮೂಲಕ **'ಸಿದ್ಧಗಂಗಾ'** ಮುನ್ನಡೆಗೆ ಸಹಕರಿಸಬೇಕಾಗಿ ಕಳಕಳಿಯಿಂದ ಪ್ರಾರ್ಥಿಸುತ್ತೇವೆ. ವಿಳಾಸ ಬದಲಾವಣೆಯಾಗಿದ್ದರೆ ದಯವಿಟ್ಟು ಬದಲಾದ ವಿಳಾಸ ಹಾಗೂ ತಮ್ಮ ದೂರವಾಣಿ ಸಂಖ್ಯೆಯನ್ನು ತಮ್ಮ (LM) ಸಂಖ್ಯೆಯೊಂದಿಗೆ ಕಾರ್ಡಿನಲ್ಲಿ ಬರೆದು ಕಳುಹಿಸಿಕೊಟ್ಟರೆ ಪತ್ರಿಕೆ ತಮಗೆ ತಲುಪಲು ಅನುಕೂಲವಾಗುತ್ತದೆ. ವಾರ್ಷಿಕ ಚಂದಾದಾರರು ತಮ್ಮ ಸದಸ್ಯತ್ವದ ಅವಧಿ ಮುಗಿದಿದ್ದರೆ ನವೀಕರಿಸಿ ಕೊಳ್ಳಬೇಕೆಂದು ಕೋರುತ್ತೇವೆ.

ಪ್ರಕಾಶಕರು,
'ಸಿದ್ಧಗಂಗಾ' ಮಾಸಪತ್ರಿಕೆ,
ಶ್ರೀ ಸಿದ್ಧಗಂಗಾ ಮಠ, ತುಮಕೂರು ಜಿಲ್ಲೆ-೫೭೨ ೧೦೪.
ದೂರವಾಣಿ : ೦೮೧೬-೨೨೮೨೩೨೨

ಲೇಖನ

# ಚಿನ್ಮಯ ಜ್ಞಾನಿ ಚೆನ್ನಬಸವಣ್ಣನವರು

- ಯೋಗೀಶ್ ನಿರ್ವಿಕಲ್ಪ *

ಮನಶುದ್ಧವಾಗಿ ಮಜ್ಜನಕ್ಕೆರೆದರೆ ಭಾವ ಮತ್ತೇಕಯ್ಯಾ?
ಪತ್ರ ಪುಷ್ಪ ರಂಗವಲ್ಲಿಯನಿಕ್ಕಲೇನು ಭಿತ್ತಿಯ ಚಿತ್ತಾರವೆ?
ಅವರು ಕಾಣಬೇಕು, ಇವರು ಕಾಣಬೇಕೆಂಬ
ಭಾವ ಭ್ರಮಿತರು ಅಂಗಹೀನರು,
ಮನದಂಗವನಗಲರು, ಲಿಂಗ ಮತ್ತೆಲ್ಲಿಯದೋ?
ಸದಮದವಳಿದು ನಿಜವನರಿದಡೆ ಲಿಂಗಕ್ಕೆ ಪೂಜೆ ಕಂಡಾ,
ಕೂಡಲಚೆನ್ನಸಂಗಯ್ಯ ಸಾಹಿತ್ಯನಾಗಿಹನು.



'ಚಂಚಲ ಸ್ವಭಾವವುಳ್ಳ ಮನಸ್ಸನ್ನು ಪೂಜೆಯ ಮೂಲಕ ಅಂತರಂಗದ ಸತ್ಯದತ್ತ ಕರೆದೊಯ್ಯುವ ದಿವ್ಯ ಉದ್ದೇಶ ಅದರಲ್ಲಿ ಅಡಗಿದೆ. ನಾವು ಮಾಡುವ ಪ್ರತಿಯೊಂದು ಪೂಜಾ ವಿಧಿ ವಿಧಾನಗಳ ಮೂಲಕ ಮನಸ್ಸು ಪರಿಶುದ್ಧಗೊಳ್ಳಬೇಕು. ಮನ ಪರಿಶುದ್ಧಗೊಳ್ಳದೆ ಅಥವಾ ಪರಿಶುದ್ಧಗೊಳ್ಳಲು ಪೂರಕ ಎನಿಸಿಕೊಳ್ಳದ ಪ್ರತಿಯೊಂದು ಪೂಜಾ ಕ್ರಿಯಾದಿಗಳೂ ಸಹ ಅನರ್ಥ ಎನಿಸಿಕೊಳ್ಳುತ್ತವೆ. ಪೂಜೆ ಎಂದಿಗೂ ಆಡಂಬರಪೂರ್ಣವಾಗಿರಬಾರದು. ಅದು ಸರಳ ಮತ್ತು ಸಹಜತೆಯಿಂದ ಕೂಡಿರಬೇಕು. ಅಷ್ಟಮದಗಳ ಪ್ರಭಾವದಿಂದ ಮನಸ್ಸು ಹೊರಬಂದು ಪರಮಾತ್ಮನನ್ನು ಪೂಜಿಸಿದರೆ ಪರಮಾತ್ಮ ತತ್ತ್ವದ ಆನಂದವನ್ನು ಕಾಣಲು ಸಾಧ್ಯ!' ಎಂಬ ವೈಚಾರಿಕ ಅರ್ಥಪೂರ್ಣ ಜ್ಞಾನ ಸಂದೇಶವನ್ನು ಜನಮಾನಸದಲ್ಲಿ ಬೆಳಗಿಸಿದವರು ಅನುಭವ ಮಂಟಪದ ದ್ವಿತೀಯ ಪೀಠಾಧ್ಯಕ್ಷರಾದ ಚಿನ್ಮಯಜ್ಞಾನಿ ಚೆನ್ನಬಸವಣ್ಣನವರು.

ಸರ್ವಕಾಲಕ್ಕೂ, ಸರ್ವರಿಗೂ ಆದರ್ಶಮಯ ಎನಿಸಿಕೊಳ್ಳಬಹುದಾದ ಒಂದು ಕಲ್ಯಾಣ ರಾಷ್ಟ್ರ ನಿರ್ಮಾಣದ ಉದ್ದೇಶದಿಂದ ಗುರುಬಸವಣ್ಣನವರ ನಾಯಕತ್ವದಲ್ಲಿ ಜರುಗಿದ ವಚನ ಚಳವಳಿಯ ಮಹಾಕಾರ್ಯದಲ್ಲಿ ಚೆನ್ನಬಸವಣ್ಣನವರು ನಿರ್ವಹಿಸಿದ ಪಾತ್ರ ಅನನ್ಯ. ಅನುಭವ ಮಂಟಪದ ದ್ವಿತೀಯ ಪೀಠಾಧ್ಯಕ್ಷರಾಗಿ ಅವರು ನೀಡಿದ ಜನಪರ ಕಾಳಜಿಯ ಸಮಾಜಮುಖಿ ಚಿಂತನೆಯ ಸಂದೇಶಗಳು ವಿಶ್ವಕ್ಕೇ ಆದರ್ಶನೀಯ. ಅವರು ನೀಡಿದ ಸಂದೇಶಗಳಲ್ಲಿ ಮಾನವ ಸಮಾಜದ ಸರ್ವಾಂಗೀಣ ಅಭಿವೃದ್ಧಿಯ ದಿವ್ಯಮಂತ್ರಗಳನ್ನು ಕಾಣಬಹುದು.

**ಚಿನ್ಮಯ ಜ್ಞಾನಿ:** ಗುರು ಬಸವಣ್ಣನವರ ಸೋದರಿ ಮಾತೆ ಅಕ್ಕನಾಗಲಾಂಬಿಕೆ ಮತ್ತು ಶಿವಸ್ವಾಮಿಯವರ ಸುಪುತ್ರರಾಗಿ ಕಲ್ಯಾಣದಲ್ಲಿ ಜನಿಸಿದ ಅವರು ಗುರು ಬಸವಣ್ಣನವರ ಜ್ಞಾನದ ಆಶ್ರಯದಲ್ಲಿ ಬೆಳೆದ ಚಿನ್ಮಯಜ್ಞಾನಿ. **'ಇಂದೇ ಹುಟ್ಟಿದ ಕೂಸಿಂಗೆ ಇಂದೇ ಜವ್ವನವಾಯಿತ್ತು'** ಎಂಬಂತಹ ತೀವ್ರಗತಿಯ ಆಧ್ಯಾತ್ಮಿಕ ಸಾಧನೆಯ ಔನ್ನತ್ಯ ಅವರದು.

* ಕುಚಲಕ್ಕಿ ಕೇರಿ, ಬಿ.ಹೆಚ್. ರಸ್ತೆ, ಶಿವಮೊಗ್ಗ-೫೭೭೨೦೧



ಅಜ್ಞಾನದಿಂದ ಜ್ಞಾನದೆಡೆಗೆ ಕರೆದೊಯ್ಯುವಂತಹ ಲಿಂಗಾಯತ ಧರ್ಮದ ಸಂವಿಧಾನದ ಶಿಲ್ಪಿಯಾಗಿ ಕಾರ್ಯನಿರ್ವಹಿಸಿದ ಅವರು ವ್ಯಕ್ತಿ ಮತ್ತು ಸಮಾಜದ ಉನ್ನತಿಯ ಉದ್ದೇಶದಿಂದ ಪ್ರತಿಪಾದಿಸಿದ ಅಷ್ಟಾವರಣ, ಪಂಚಾಚಾರ ಮತ್ತು ಷಟ್‌ಸ್ಥಲ ಸಿದ್ಧಾಂತಗಳು ಲಿಂಗಾಯತ ಧರ್ಮದ ಪ್ರಾಣ ಎನಿಸಿಕೊಂಡಿವೆ. ಅವುಗಳಿಗೆ ತಾರ್ಕಿಕ ಭಾಷ್ಯ ಬರೆದ ಅವರು ಅವುಗಳ ಮೂಲಕ ವ್ಯಕ್ತಿ ಮತ್ತು ಸಮಾಜದ ಪ್ರಗತಿಯನ್ನು ಸಾಧಿಸಿ ತೋರಿಸಿದರು. ತತ್ತ್ವ ವಿಚಾರಗಳ ಕ್ರಿಯಾತ್ಮಕ ಆಚರಣೆಯಿಂದ ಮಾತ್ರ ಒಂದು ಸಮಾಜ ಅಥವಾ ರಾಷ್ಟ್ರ ಉನ್ನತಿ ಕಾಣಲು ಸಾಧ್ಯ ಎಂಬ ವಿಚಾರಧಾರೆ ಅವರದು.

ಹಲವಾರು ಧರ್ಮ ಸೂಕ್ಷ್ಮ ಪ್ರಶ್ನೆ ಮತ್ತು ಸಂಶಯಗಳಿಗೆ ಅವರ ವಚನಗಳು ಉತ್ತರ ನೀಡುತ್ತವೆ. ಅವರ ವಚನಗಳಲ್ಲಿ ತಾತ್ವಿಕ ವಿವೇಚನೆಯ ಸಂದೇಶಗಳನ್ನು ನಾವು ಪ್ರಮುಖವಾಗಿ ಕಾಣಬಹುದು. ಜಗತ್ತಿಗೇ ಮಾದರಿಯಾಗಿ ಕಾರ್ಯನಿರ್ವಹಿಸಿದ **'ಅನುಭವ ಮಂಟಪ'**ದೊಳಗಿನ ಅನುಭಾವ ಪೂರ್ಣ ವಿಚಾರಗಳ ಸಂವಾದಕ್ಕೆ ಅವರಿಂದ ಅಂತಿಮ ಮುದ್ರೆ ದೊರಕಿದ ನಂತರವೇ ಅವುಗಳು ಅಧಿಕೃತಗೊಳ್ಳುತ್ತಿದ್ದವು. ಈ ಸಂಗತಿ ಅವರೊಳಗಿನ ಅಪ್ರತಿಮ ಜ್ಞಾನ ಪ್ರಖರತೆಗೊಂದು ಸಾಕ್ಷಿಯೆಂದೇ ಉಲ್ಲೇಖಿಸಬಹುದು.

**ಷಟ್‌ಸ್ಥಲ ಸಿದ್ಧಾಂತ :** ಚೆನ್ನಬಸವಣ್ಣನವರ ವಚನಗಳಲ್ಲಿ ಲಿಂಗಾಯತ ಧರ್ಮದ ಆಚಾರ ವಿಚಾರಗಳು ಸಮಗ್ರವಾಗಿ ಅನಾವರಣಗೊಂಡಿರುವುದನ್ನು ನಾವು ಕಾಣಬಹುದು. ಲಿಂಗಾಯತ ಧರ್ಮದ ತಲಸ್ಪರ್ಶಿಯ ಅಧ್ಯಯನಕ್ಕೆ ಅವರ ವಚನಗಳು ಸದಾ ದಾರಿದೀಪ ಎನಿಸಿಕೊಂಡಿವೆ.

**ಭಕ್ತನೆಂದೆನಿಸಿಕೊಂಬುದಯ್ಯಾ ಭಕ್ತಿವಿಡಿದು,**
**ಮಾಹೇಶ್ವರನೆನಿಸಿಕೊಂಬುದಯ್ಯಾ ನಿಷ್ಠೆವಿಡಿದು,**
**ಪ್ರಸಾದಿಯೆನಿಸಿಕೊಂಬುದಯ್ಯಾ ಅವಧಾನವಿಡಿದು,**
**ಪ್ರಾಣಲಿಂಗಿಯೆನಿಸಿಕೊಂಬುದಯ್ಯಾ ಅನುಭಾವವಿಡಿದು,**
**ಶರಣನೆನಿಸಿಕೊಂಬುದಯ್ಯಾ (ಆನಂದದಿಂದ)**
**ಐಕ್ಯನೆನಿಸಿಕೊಂಬುದಯ್ಯಾ ಸಮರಸದಿಂದ**
**ಇಂತೀ ಷಡುಸ್ಥಲ ಸಾಹಿತ್ಯನಾಗಿ**
**ಕೂಡಲ ಚೆನ್ನಸಂಗಯ್ಯನಲ್ಲಿ ಸಹಜನೆನಿಸಿಕೊಂಬುದಯ್ಯಾ**

ಬದುಕಿನ ಪರಮ ಸಾರ್ಥಕತೆಯಾದ ಪರಮಾತ್ಮನ ಸಾಕ್ಷಾತ್ಕಾರವನ್ನು ಷಟ್‌ಸ್ಥಲ ಸಿದ್ಧಾಂತದ ಮೂಲಕ ಕಂಡುಕೊಳ್ಳಲು ತಿಳಿಸಿದ ಅವರು ಮಾನಸಿಕ ಪರಿಶುದ್ಧತೆಯ ವಿಕಸನದ ನಂತರದ ಸತ್‌ಪರಿಣಾಮವೇ ಪರಮಾತ್ಮ ತತ್ತ್ವದೊಳಗಿನ ಸಮರಸದ ಆನಂದ ಎನ್ನುತ್ತಾರೆ. ಮಾನಸಿಕ ಪರಿಶುದ್ಧತೆಯ ವಿಕಸನದ ಪ್ರಥಮ ಸ್ಥಲವಾದ ಭಕ್ತಿಸ್ಥಲದಲ್ಲಿ, ಸಾಧಕ ಭಕ್ತನಲ್ಲಿ ಪರಮಾತ್ಮನ ಕುರಿತು ನಿರ್ಮಲ ಪ್ರೀತಿ ಇರಬೇಕು. ಅದುವೇ ಭಕ್ತಿವುಳ್ಳ ಭಕ್ತನ ಪ್ರಥಮ ಲಕ್ಷಣ. ಮಹೇಶ್ವರ ಸ್ಥಲದಲ್ಲಿ ಪರಮಾತ್ಮನಲ್ಲಿ ಅಚಲವಾದ ನಿಷ್ಠೆ ಇರಬೇಕು. ಮೂರನೇ ಸ್ಥಲವಾದ ಪ್ರಸಾದಿ ತತ್ತ್ವದಲ್ಲಿ ಭಕ್ತ ಸದಾ ಎಚ್ಚರದಿಂದಿರಬೇಕು. ಯಾವುದೇ ಕಾರಣಕ್ಕೂ ಅನಾತ್ಮ ವಿಚಾರಗಳು ಮನಸ್ಸಿನೊಳಗೆ ಬಾರದಂತೆ ನೋಡಿಕೊಳ್ಳುವ ಜಾಗೃತ ಪ್ರಜ್ಞೆ ಇರಬೇಕು. ಪ್ರಾಣಲಿಂಗಿ ಸ್ಥಲದಲ್ಲಿ ಪರಮಾತ್ಮನ ಅನುಭಾವ ಮನಸ್ಸಿನಲ್ಲಿ ತುಂಬಿರಬೇಕು. ಅಂದರೆ ಮನಸ್ಸಿನ ಚಿತ್ತವೃತ್ತಿಗಳು ಅಳಿದು ಮನಸ್ಸು ಪರಮಾತ್ಮನ ಮಂತ್ರದಿಂದ ಮಂತ್ರಮಯಗೊಂಡಿರಬೇಕು. ಶರಣ ಸ್ಥಲದಲ್ಲಿ ಸಾಧಕ ಭಕ್ತ ಮನ, ಬುದ್ಧಿ, ಚಿತ್ತಗಳಿಗೆ ಅತೀತವಾದ ಪರಮಾನಂದ (Transcedental)ವನ್ನು ಕಾಣಬಹುದು. ಐಕ್ಯಸ್ಥಲದಲ್ಲಿ ಎಲ್ಲಾ ರೀತಿಯ ದ್ವಂದ್ವ ಅಂದರೆ ನಾ ಬೇರೆ, ಜಗತ್ತು ಬೇರೆ ಮತ್ತು ಪರಮಾತ್ಮ ಬೇರೆ ಎಂಬೆಲ್ಲಾ ಭಿನ್ನತೆಯಿಂದ ಹೊರಬರಬೇಕು. ಪರಮಾತ್ಮ ತತ್ತ್ವದಲ್ಲಿ ನಾನೆಂಬ ಅಹಂ ಸಮರಸಗೊಳ್ಳಬೇಕು.

ತನ್ನ ಅಂತರಂಗದಲ್ಲಿಯೇ ಇರುವ ಪರಮ ಸತ್ಯವನ್ನು ಅರಿಯುವ ಜ್ಞಾನಮಾರ್ಗವನ್ನು ಷಟ್‌ಸ್ಥಲ ಸಿದ್ಧಾಂತದ ಮಾರ್ಗಸೂಚಿಯಲ್ಲಿ ಚೆನ್ನಬಸವಣ್ಣನವರು ಅತ್ಯಂತ ಅರ್ಥಪೂರ್ಣ ಮತ್ತು ವೈಚಾರಿಕ ಪೂರ್ಣವಾಗಿ ವಿವರಿಸಿರುವುದು ಅತ್ಯಂತ ಗಮನಾರ್ಹ.

### ಪರಮಾತ್ಮನ ಸಾಕ್ಷಾತ್ಕಾರ

**ಅನ್ನವನ್ನಿಕ್ಕಿದರೆ ಪುಣ್ಯವಹುದು,**
**ವಸ್ತ್ರವ ಕೊಟ್ಟರೆ ಧರ್ಮವಹುದು,**
**ಹಣವ ಕೊಟ್ಟರೆ ಶ್ರೇಯಹುದು,**
**ತ್ರಿಕರಣ ಶುದ್ಧನಾಗಿ ನೆನೆದರೆ ಮುಕ್ತಿಯಹುದು,**
**ಕೂಡಲ ಚೆನ್ನಸಂಗಯ್ಯನಲ್ಲಿ.**

ಹಸಿದವರಿಗೆ ಅನ್ನಪಾನಾದಿಗಳನ್ನು ನೀಡಿ ಉಪಚರಿಸಿದರೆ ಪುಣ್ಯಗಳಿಸಲು ಸಾಧ್ಯವುಂಟು ! ವಸ್ತ್ರದಾನ ಮಾಡಿದರೆ ಅದು ಧರ್ಮಕಾರ್ಯ ಎನಿಸಿಕೊಳ್ಳಬಹುದು. ಹಣದಾನ ನೀಡಿದರೆ ಸಂಪತ್ತು ಮತ್ತಷ್ಟ ವೃದ್ಧಿಸಬಹುದು. ಆದರೆ ಅನ್ನ, ವಸ್ತ್ರ ಮತ್ತು ಹಣಗಳ ದಾನದಿಂದ ಮುಕ್ತಿ ಪದವಿ







ಗೊಳಿಸಿಕೊಳ್ಳಲು ಸಾಧ್ಯವಿಲ್ಲ ಎನ್ನುವ ಚೆನ್ನಬಸವಣ್ಣನವರು, ಅವುಗಳೂ ಸಹ ಬಂಧನಕ್ಕೆ ಅಥವಾ ಭವಕ್ಕೆ ಕಾರಣ ಎನ್ನುತ್ತಾರೆ. ಕಾಯ, ವಾಚಾ ಮತ್ತು ಮನಃಶುದ್ಧವಾಗಿ ಮತ್ತು ಪರಮಾತ್ಮನನ್ನೇ ಏಕಮಾತ್ರ ಗುರಿಯಾಗಿಸಿಕೊಂಡು ತತ್ತ್ವಅನುಷ್ಠಾನ ಮಗ್ನರಾದರೆ ಮಾತ್ರ ಪರಮಾತ್ಮನ ಘನ ಕಾರುಣ್ಯದ ಮುಕ್ತಿ ಕಾಣಲು ಸಾಧ್ಯ ಎಂಬ ಮಾರ್ಮಿಕ ಸಂದೇಶ ಅವರದ್ದು.

**ಅನುಭಾವವೇ ಪರಮಶ್ರೇಷ್ಠ :**

**ತನುಮರಾದಿಗಳಲ್ಲಿಗೆ ಹೋಗಿ ಅನಂತಕಾಲ**
**ತಪಸ್ಸಿಹುದರಿಂದ**
**ಒಂದು ದಿನ ಗುರುಚರಣ ಸೇವೆ ಸಾಲದೆ?**
**ಅನಂತಕಾಲ ಗುರುಚರಣಸೇವೆಯ ಮಾಡೂದರಿಂದ**
**ಒಂದು ದಿನ ಲಿಂಗಪೂಜೆ ಸಾಲದೆ?**
**ಅನಂತಕಾಲ ಲಿಂಗಪೂಜೆಯ ಮಾಡೂದರಿಂದ**
**ಒಂದು ದಿನ ಜಂಗಮತೃಪ್ತಿ ಸಾಲದೆ?**
**ಅನಂತಕಾಲ ಜಂಗಮತೃಪ್ತಿಯಮಾಡೂದರಿಂದ**
**ಒಂದು ನಿಮಿಷ ನಿಮ್ಮ ಶರಣರ ಅನುಭವ ಸಾಲದೆ**
**ಕೂಡಲಚೆನ್ನಸಂಗಮದೇವಾ?**

ಶರಣರ ಅನುಭಾವ ಪರಮಶ್ರೇಷ್ಠವಾದದ್ದು ಎಂದು ತಿಳಿಸುವ ಚೆನ್ನಬಸವಣ್ಣನವರ ವಚನ ಸಂದೇಶದಲ್ಲಿ ದೂರದೃಷ್ಟಿಯ ಚಿಂತನೆಯನ್ನು ನಾವು ಕಾಣಬಹುದು. ಬೃಹದಾರಣ್ಯದಲ್ಲಿ ಏಕಾಂಗಿಯಾಗಿ ಅನಂತ ಕಾಲ ತಪಸ್ಸು ಆಚರಿಸುವುದಕ್ಕಿಂತಲೂ ಒಬ್ಬ ಯೋಗ್ಯ ಗುರುವಿನ ಬಳಿ ಸಾಗಿ, ಅವರ ಪಾದಸೇವೆ ಮಾಡುವುದು ಉತ್ತಮವಾದುದು ಎನ್ನುತ್ತಾರೆ.

ಗುರುವಿನ ಮಾರ್ಗದರ್ಶನವಿಲ್ಲದೆ ಏಕಾಂಗಿಯಾಗಿ ಅರಣ್ಯದಲ್ಲಿ ತಪೋಮಗ್ನನಾಗುವ ಸಾಧಕ ದಾರಿತಪ್ಪುವ ಸಾಧ್ಯತೆಗಳು ಅಧಿಕ. ಮನಸ್ಸನ್ನು ವಿವೇಕಯುಕ್ತವಾಗಿ ಹಾಗೂ ಯಾವ ಸತ್‌ದಿಕ್ಕಿನಲ್ಲಿ ಕರೆದೊಯ್ಯಬೇಕೆಂಬ ಜ್ಞಾನವಿಲ್ಲದೇ ಇದ್ದಾಗ, ಅದು ಸಮಾಜಕ್ಕೆ ಅಪಾಯಕಾರಿಯಾಗಿ ಪರಿವರ್ತಿತಗೊಳ್ಳಬಹುದು. ಈ ಕಾರಣದಿಂದ ಸಾಧನೆಯ ದಿನಗಳಲ್ಲಿ ಒಬ್ಬ ಯೋಗ್ಯ ಗುರುವಿನ ಬಳಿ ಸಾಧಕ ಸಾಗುವುದು ಅತ್ಯಂತ ಅಗತ್ಯ. ಗುರುಚರಣ ಸೇವೆಗಿಂತಲೂ ತನು ಮನ ಪೂರ್ವಕವಾಗಿ ಪರಮಾತ್ಮನನ್ನು ಅರಿತು ಪೂಜಿಸುವುದು ಅತ್ಯಂತ ಉತ್ತಮ. ಲಿಂಗಪೂಜೆಗಿಂತಲೂ ಒಂದು ದಿನದ ಜಂಗಮ ತೃಪ್ತಿ ಅತ್ಯಂತ ಶ್ರೇಷ್ಠವಾದದ್ದು. ಕಾರಣ ಜಂಗಮ ತೃಪ್ತಿಯ ಕಾರ್ಯ ಅತ್ಯಂತ ಕಷ್ಟಸಾಧ್ಯ ಸಂಗತಿ. ಯಾವುದೇ ಸ್ತುತಿ ನಿಂದೆಯ ಪರಿಣಾಮಕ್ಕೊಳಗಾಗದ ಮನ ಸಂಸ್ಥಿರತೆ ಜಂಗಮ ತೃಪ್ತಿಯ ಕಾರ್ಯದಲ್ಲಿ ಅತ್ಯಂತ ಅವಶ್ಯಕವಾಗಿ ಇರಬೇಕಾಗುತ್ತದೆ. ಜಂಗಮ ತೃಪ್ತಿಗಿಂತಲೂ ಒಂದು ನಿಮಿಷದ ಶರಣರ ಅನುಭಾವ ಪರಮ ಶ್ರೇಷ್ಠವಾದದ್ದು ಎಂಬ ಸಂದೇಶವನ್ನು ಚೆನ್ನಬಸವಣ್ಣನವರ ವಚನ ಮನಗಾಣಿಸುತ್ತದೆ.

ಪರಮಾತ್ಮ ತತ್ತ್ವದ ಪರಮಾನಂದದ ಪ್ರತೀಕದಂತಿರುವ ಶರಣರ ಅನುಭಾವದಲ್ಲಿ ನಮ್ಮ ಬದುಕಿನ ಸರ್ವರೀತಿಯ ಬಂಧನಗಳನ್ನು ಕಳೆದುಕೊಳ್ಳಬಹುದು. ಶರಣರ ಅನುಭಾವ ಪರಮಪಾವನವಾದದ್ದು. ಅದು ನಮ್ಮ ತನು ಮನಗಳನ್ನು ಶುದ್ಧೀಕರಿಸುತ್ತದೆ. ಅದು ಬದುಕಿಗೆ ಸಾತ್ವಿಕ ಸಂಸ್ಕಾರ ನೀಡುತ್ತದೆ. ಶರಣರ ದಿವ್ಯಾನುಭವದಿಂದ ಸಹಜವಾಗಿ ಪರಮ ಸತ್ಯವನ್ನು ಸಾಕ್ಷಾತ್ಕರಿಸಿಕೊಳ್ಳಬಹುದು.

ಪರಮಾತ್ಮ ತತ್ತ್ವದ ಜ್ಞಾನ ಬೆಳಕನ್ನು ಮನದಲ್ಲಿ ಬೆಳಗಿಸಿಕೊಳ್ಳುವುದೇ ಬದುಕಿನ ಪರಮ ಸಾರ್ಥಕತೆ ಎಂದು ತಿಳಿಸಿರುವ ಚೆನ್ನಬಸವಣ್ಣನವರ ದಿವ್ಯ ನುಡಿಗಳನ್ನು ಮನನ ಮಾಡಿಕೊಂಡು ನಾವುಗಳು ಸಹ ತನು ಮನಗಳಲ್ಲಿ ಪರಮಾತ್ಮ ತತ್ತ್ವದ ಜ್ಞಾನ ಬೆಳಕನ್ನು ಬೆಳಗಿಸಿಕೊಳ್ಳುವ ಪ್ರಾಮಾಣಿಕ ಪ್ರಯತ್ನ ಮಾಡುವುದು ಅತ್ಯಂತ ಅವಶ್ಯಕ. ತತ್ತ್ವಾಚರಣೆಯ ಮೂಲಕ ನಾವು ಅವರಿಗೆ ಸಲ್ಲಿಸುವ ನಮನ ನಿಜಕ್ಕೂ ಅರ್ಥಪೂರ್ಣವೆನಿಸಿದೆ.

**ಶ್ರೀವಾಣಿ**

**ರೈತನಿಗೆ ಸಗಣಿ ಚಿನ್ನಕ್ಕೆ ಸಮಾನವಾದುದು. ಆ ಚಿನ್ನ ಎಲ್ಲಿರಬೇಕೋ ಅಲ್ಲಿದ್ದಾಗಲೇ ಅದರ ಸಾರ್ಥಕತೆ. ಜೀವನಾವಶ್ಯಕವಾದ ಸಗಣಿಯಲ್ಲಿ ರೈತ ಪರಮಾತ್ಮನ ಕರುಣೆಯ ಪ್ರಸಾದವನ್ನು ಕಾಣುತ್ತಾನೆ. ಬೆಳೆವ ಪೈರಿಗೆ ಬೇಕಾದ ಜೀವ ದ್ರವ್ಯವಾದ ಸಗಣಿ ವ್ಯರ್ಥವಾಗಿ ಹೋಗಬಾರದೆಂದು ಪೂಜ್ಯಭಾವದಿಂದ ಕಾಣುತ್ತಾನೆ. ದಾರಿಯಲ್ಲಿ ಬಿದ್ದಿದ್ದ ಸಗಣಿಯನ್ನು ಕಂಡಾಗ ಅದನ್ನೆತ್ತಿ ಹೊಲಕ್ಕೆ ಹಾಕಿ – ಆ ಹೊಲ ತನ್ನದಲ್ಲವಾದರೂ ಮುನ್ನಡೆಯುತ್ತಾನೆ. ಸಗಣಿ ಜೀವದ್ರವ್ಯವೆಂಬ ಗುಣಗ್ರಾಹಿತ್ವ ಅವನದು.**







**ಚಿಂತನೆ**

# ಬದುಕಿನ ಅರ್ಥ – ಒಂದು ಚಿಂತನೆ

– ಸ.ರಾ. ಸುಳಕೂಡೆ *

ಬದುಕು ಅಂದರೆ ಉಪದ್ರವಕ್ಕೆ ಒಳಗಾಗದಿರುವುದು ಮತ್ತು ಉಪದ್ರವವನ್ನು ಸಕಲ ಜೀವಾತ್ಮರಿಗೆ ಕೊಡದಿರುವುದಾಗಿದೆ. ಅಂದರೆ ಬಸವಣ್ಣನವರು ಹೇಳಿದಂತೆ ಸಕಲ ಜೀವಾತ್ಮರಿಗೆ ಲೇಸನ್ನೇ ತರುವುದಾಗಿದೆ. ಮನುಷ್ಯನ ಬದುಕಿಗೆ ಮಹತ್ತರವಾದ ಅರ್ಥವಿರುವುದನ್ನು ಈ ಜಗ ಒಪ್ಪಿಕೊಂಡ ಸತ್ಯವೇ ಆಗಿದೆ. ಮಾನವನ ವಿವಿಧ ಮುಗದೊಳಗೆ ಬದುಕಿದ ರೀತಿ–ನೀತಿಗಳನ್ನು ಅತ್ಯಂತ ವಸ್ತುನಿಷ್ಠವಾಗಿ ಚಿತ್ರಸಲಾಗಿದೆ. ವ್ಯಕ್ತಿಗತ ಬದುಕು, ಸಾರ್ವಜನಿಕ ಬದುಕು, ತಾತ್ವಿಕ ಬದುಕು, ಸಾತ್ವಿಕ ಬದುಕು, ದಾರಿದ್ರ್ಯವುಳ್ಳ ಬದುಕು, ಸಮೃದ್ಧಿಯುಳ್ಳ ಬದುಕು, ಅಸೆ–ನಿರಾಶೆಯ ಬದುಕು, ಏರು, ಇಳುವಿನ ಬದುಕು, ಸತ್ಯ–ಅಸತ್ಯದ ಬದುಕು, ಅಂಧಕಾರ–ಬೆಳಕಿನ, ಜ್ಞಾನ–ಅಜ್ಞಾನದ ಬದುಕು, ಸಾಹಿತ್ಯ, ಸಂಗೀತ, ಸಾಂಸ್ಕೃತಿಕ, ಸಾಮಾಜಿಕ, ರಾಜಕೀಯ, ಧಾರ್ಮಿಕ ಬದುಕು. ಒಂದೊಂದು ಕಾಲಕ್ಕೆ ಇನ್ನೊಂದಾಗಿ ಹರಡಿಕೊಂಡಿದೆ. ಮನುಷ್ಯನ ವಿದ್ಯೆ–ವಿಜ್ಞಾನಗಳು ಮಾನವನ ಬದುಕಿಗೆ ಅರ್ಥವಂತಿಕೆಯನ್ನು ತುಂಬಲು ಗತಿಶೀಲಗೊಂಡಿವೆ. ಆಧುನಿಕತೆಯು ಮನುಷ್ಯನ ಬದುಕಿನ ಆದರ್ಶ, ಉದ್ದೇಶ, ಗುರಿಗಳಲ್ಲಿ ಭೂಮಿ–ಅಕಾಶದಷ್ಟು ವಿಸ್ತರಿಸಿವೆ. ಇಂದು ಬದುಕು, ಸಂಪತ್ತು ಮತ್ತು ಸೌಂದರ್ಯದ ನಡುವೆ ವ್ಯಸ್ತಗೊಂಡಿವೆ. ಮೋಜು–ಮಸ್ತಿಗಳು ಈ ಮುಗದೊಳಗೆ ಸಾಕಷ್ಟು ಬದುಕಿನೊಳಗೆ ನುಗ್ಗಿ ಹೋಗಿವೆ. ಏನಾದರೂ ಸರಿ, ಸಂಪತ್ತು, ಸುಖ ಪ್ರಾಧಾನ್ಯತೆಯು ನಮ್ಮ ಬದುಕ ಬೇಕೆಂಬುದು ಗುರುತರವಾಗಿದೆ. ಇದನ್ನೇ ಇನ್ನೊಂದು ತೆರನಾಗಿ ಖಲೀಲ್ ಗಿಬ್ರಾನ್ ಹೀಗೆ ಹೇಳಿದ್ದಾನೆ.

**ಬದುಕು ಕೇವಲ ಆಮೋದ ಪ್ರಮೋದವಲ್ಲ, ಬದುಕು ಕೇವಲ ಮೋಜುಗಾರಿಕೆಯಲ್ಲ;**
**ಬದುಕು ಆಸೆ–ಆಕಾಂಕ್ಷೆ, ಬದುಕು ದೃಢಸಂಕಲ್ಪ.**

ಬದುಕನ್ನು ಒಂದೊಂದು ತೆರನಾಗಿ ನಿರ್ವಹಿಸುವಲ್ಲಿ ಅಸಕ್ತಿ ಇದೆ. ಒಂದೊಂದು ಉದ್ಯೋಗ ಹವ್ಯಾಸ, ಅಸಕ್ತಿಗಳೇ ಬದುಕಾಗಿ ಮಾರ್ಪಟ್ಟಿವೆ. ಮನುಷ್ಯನು ವೈವಿಧ್ಯಮಯ ಈ ಬದುಕನ್ನು ಇಂದು ಏಕತಾನತೆಗೆ ಒಯ್ಯುವ ಭರಾಟೆಯೊಳಗಿದ್ದಾನೆ. ಒಂದು ವಿದ್ಯೆ ಗಳಿಸಿಕೊಂಡು, ಉದ್ಯೋಗವನ್ನು ಮಾಡಿ, ಸಂಪತ್ತು ಗಳಿಸಿ, ಸಂಪತ್ತನ್ನು ನಿತ್ಯ ಅವಶ್ಯಕತೆ ಅಮೋದ, ಪ್ರಮೋದಗಳಲ್ಲಿ ವಿನಿಯೋಗಿಸುವುದೇ ಬದುಕಾಗಿದೆ. ಜನರ ಸೇವೆ, ಸಾಮಾಜಿಕ ಸೇವೆ, ರಾಜಕೀಯ, ಧಾರ್ಮಿಕ ಸಹಕಾರ ಕ್ಷೇತ್ರಗಳಲ್ಲಿ ಸೇವೆಯು ಸಹ ಉದ್ಯೋಗಗಳನ್ನಾಗಿಸಿಕೊಂಡು, ಅದೇ ಬದುಕೆಂದು ಬಿಂಬಿಸುವ ಕಾರ್ಯ ಪ್ರಚಲಿತಕ್ಕೆ ಬಂದಿದೆ. ಸಕ್ರಮ ಉದ್ಯೋಗದೊಳಗೆ, ಕಾನೂನು ರೀತಿಯೊಳಗಿರುವುದು, ಸಭ್ಯತೆಯಿಂದಿರುವುದು, ಸದ್ಗುಣ ಪಾಲಿಸುವುದು, ದಯೆ, ಧರ್ಮದಿಂದಿರುವುದೆಲ್ಲವು ಉತ್ತಮ. ಅನೀತಿ, ಅಧರ್ಮ, ಅನಾಚಾರ, ದುರಾಚಾರ, ಅಹಂಕಾರ, ಅಸಭ್ಯತೆ, ಅನಾಚಾರ, ದರ್ಪದಿಂದ ಇರುವುದೆಲ್ಲವೂ ಅಕ್ರಮ ಬದುಕು, ಅಧರ್ಮದ ಬದುಕೆಂದು ಹೇಳಲಾಗುತ್ತದೆ. ಆಕ್ರಮ ಸಕ್ರಮ ವಿಂಗಡಿಸಿಕೊಂಡು ಬದುಕುವುದೇ ಮಾನವನ ಬದುಕು ಎಂದು ಹೇಳಲಾಗುತ್ತದೆ. ಬದುಕು ಎನ್ನುವುದು ಒಂದು ಆಯ್ಕೆ ಎಂದು ಹೇಳಬಹುದಾಗಿದೆ. ಆಯಾ ಕುಟುಂಬ, ಸಮಾಜ ಪರಂಪರೆ, ಧರ್ಮ, ವಿದ್ಯೆ, ವಿಜ್ಞಾನಗಳು ನಮ್ಮ ಬದುಕನ್ನು ರೂಪಿಸುತ್ತವೆ. ಅದಕ್ಕೆಂದೇ ಮನುಷ್ಯನು ಪರಿಸರದ ಕೂಸು ಎಂದು ಹೇಳಲಾಗುತ್ತಿದೆ. ಒಂದೇ ಗಿಡದೊಳಗೆ ಸೃಷ್ಟಿಗೊಂಡ ಹಣ್ಣುಗಳು, ಹುಳಿ, ಸಿಹಿಯಾಗಿರುತ್ತವೆ ಎನ್ನುವಂತೆ ಒಂದೇ ಕುಟುಂಬದ ಮಕ್ಕಳ ಬದುಕು ಸಹನೀಯವಾಗಿರುತ್ತದೆಂದು ಹೇಳಲಿಕ್ಕಾಗದು. ಸಂಕುಚಿತ, ವಿಶಾಲವುಳ್ಳ ಮನೋಭಾವ ಅವರವರ ಬದುಕಿನ ಶೈಲಿ ಎಂದು ಹೇಳಬಹುದು. ಇದನ್ನೇ ಖಲೀಲ್ ಗಿಬ್ರಾನ್ ಹೀಗೆ ಹೇಳಿದ್ದಾರೆ.

* # ೧೩೧೬, ಶ್ರೀ ಶಿವಪ್ರಸಾದ, ರಾಮತೀರ್ಥನಗರ, ಬೆಳಗಾವಿ







**ಬದುಕನ್ನು ನಿಂದಿಸುವ ಪಾಷಂಡಿಗಳು**
**ಬದುಕನ್ನು ಪಾವನವಾಗಿಸುವ ಪುಣ್ಯಶಾಲಿಗಳು**
**ಬದುಕನ್ನು ಧ್ಯಾನಿಸುವ ತಪಸ್ವಿಗಳು**
**ಇವರೆಲ್ಲರನ್ನೂ ಸಮಾನವಾಗಿ ಪ್ರೀತಿಸುತ್ತೇನೆ.**

ಮೊದಲನೆಯ ವರ್ಗವನ್ನು ಅವರ ಸಕಲ ದುಃಖ, ಕ್ಲೇಶ, ದುರ್ದೆಸೆಗಳಿಗಾಗಿ ಪ್ರೀತಿಸುತ್ತೇನೆ. ಎರಡನೆಯ ವರ್ಗವನ್ನು ಔದಾರ್ಯಕ್ಕಾಗಿ ಪ್ರೀತಿಸುತ್ತೇನೆ, ಮೂರನೆಯ ವರ್ಗವನ್ನು ಅವರ ಜ್ಞಾನ, ಅಂತರ್ಬೋಧೆ ಮತ್ತು ಪ್ರಶಾಂತತೆಗಾಗಿ ಪ್ರೀತಿಸುತ್ತೇನೆ.

ಪ್ರತಿ ವ್ಯಕ್ತಿಯು ಒಂದೊಂದು ವೈಶಿಷ್ಟ್ಯವಾದ ಬದುಕಿನೊಂದಿಗೆ ಗುರುತಿಸಿಕೊಂಡಿರುತ್ತಾನೆ. ಈ ಗುರುತಿಸಿಕೊಳ್ಳುವಿಕೆಯು ಅನೇಕ ಅಂಶಗಳನ್ನು ಅವಲಂಬಿಸಿರುತ್ತದೆ. ಮಾನವನ ಬದುಕು ವ್ಯರ್ಥ ಅಲಾಪವೆನ್ನುವವರು ಇನ್ನೂ ಇದ್ದಾರೆ. ಜಗತ್ತೇ ಮಿಥ್ಯವೆಂದು ಪರಿಭಾವಿಸುವವರು ಇನ್ನೂ ಇದ್ದಾರೆ. ಅವರು ಮನುಷ್ಯನ ಬದುಕನ್ನು ಗೊಂಬೆ ಅಟಕ್ಕೆ ಹೋಲಿಸಿದ್ದಾರೆ. ಇಲ್ಲಿ ಇರುವುದು ಸುಮ್ಮನೆ, ಅಲ್ಲಿದೆ ನಮ್ಮ ಮನೆ, ಬದುಕು ಎನ್ನುವವರೂ ಸಾಕಷ್ಟಿದ್ದಾರೆ. 'ಪ್ರಯತ್ನವೇ ಬದುಕು' ಎಂದು ಜೀವವನ್ನು ಪಣಕ್ಕೆ ಹಚ್ಚಿ ದುಡಿಯುವವರು, ಆಡುವವರು ಹಾಡುವವರು, ಓಡಾಡಿ ಗುದ್ದಾಡುವವರೂ ನಮ್ಮವರೇ ಆಗಿದ್ದಾರೆ. ಬದುಕನ್ನು ಒಂದು ಆಟವೆಂದು, ಸ್ಪರ್ಧೆಯ ಅವಕಾಶವೇ ಬದುಕು, ಬದುಕಿನ ಮರ್ಮವೆನ್ನುವವರು ನಮ್ಮ ಮಧ್ಯೆ ಇದ್ದಾರೆ. 'ಬದುಕು' ಇದೊಂದು ಮನುಷ್ಯನು ಸೃಷ್ಟಿಸಿಕೊಂಡ ಒಂದು ವ್ಯವಸ್ಥೆಯಾಗಿದೆ. ಪಶು-ಪಕ್ಷಿಗಳಲ್ಲಿ ಬದುಕಿದೆ. ಅ ಬದುಕು, ಅತ್ಯಂತ ಸಿಮೀತವಾದದ್ದು.

ಪಶು ಸಮಾನ ಬದುಕು ಮನುಷ್ಯನದಾಗಬಾರದೆಂಬುದು ಲೋಕದ ಪ್ರಜ್ಞಾವಂತರ ನಿಷ್ಠುರ ನಿರ್ಧಾರವಾಗಿದೆ. ಮನುಷ್ಯ ಉತ್ತಮ ಬದುಕಿಗಾಗಿ ಹೋರಾಡುವ ಅನಿವಾರ್ಯತೆ ಇದೆ. ಅದರಂತೆ ಸುಖ, ಶಾಂತಿ, ನೆಮ್ಮದಿಯ ಬದುಕು ಯಾವುದೆಂಬುದನ್ನು ತಿಳಿದುಕೊಂಡು, ಅಣ್ಣ ಬಸವಣ್ಣನವರಂತೆ ನುಡಿದಂತೆ ನಡೆಯುವ ಬದುಕಿಗೆ ಬದ್ಧರಾಗಬೇಕಿದೆ. ಜಗತ್ತಿನ ಪ್ರವಾದಿಗಳು ಮನುಷ್ಯನ ಬದುಕಿನ ತಾತ್ಪರ್ಯವನ್ನು ಅತ್ಯಂತ ತರ್ಕಬದ್ಧವಾಗಿ ನಿರೂಪಿಸಿದ್ದಾರೆ. ಪ್ರವಾದಿಗಳು ಬದುಕು ಸಾರ್ಥಕಗೊಳಿಸಿಕೊಳ್ಳುವ ಸುಮಾರ್ಗಗಳನ್ನೇ ತೆರೆದು ತೋರಿಸಿದ್ದಾರೆ. ಇಷ್ಟಾದರೂ ಬದುಕನ್ನು ವ್ಯರ್ಥ ಆಲಾಪ, ಅನಾರೋಗ್ಯತೆಗೆ ಗುರಿಯಾಗಿಸುವುದು ತಪ್ಪಿಲ್ಲ. ಮನುಷ್ಯನು 'ಬದುಕಿಗಾಗಿ' ಅನೇಕ ದುರಂತಗಳನ್ನು ಸೃಷ್ಟಿಸಿದ್ದಾನಲ್ಲದೆ, ತಾರತಮ್ಯ, ಮೇಲು-ಕೀಳು, ಅಂತಸ್ತು, ಅಧಿಕಾರದ ಅಂತರಗಳಿಂದ ಪ್ರಭಾವಿತನಾಗಿ, ತನ್ನವರನ್ನು, ಅನ್ಯರನ್ನು ಬದುಕದಂತೆ ಮಾಡಿದ್ದಾನೆ. ಮಾನವನ ಬದುಕು ಎನ್ನುವುದನ್ನೇ ಮರೆತು ಪಶುಗಳಿಗಿಂತಲೂ ಹೇಯವಾಗಿ ನಡೆದುಕೊಳ್ಳುತ್ತಲಿದ್ದಾನೆ.

**ಸ್ವಾತಂತ್ರ ರಹಿತ ಬದುಕು**
**ಆತ್ಮರಹಿತ ದೇಹದಂತೆ**
**ವಿವೇಕರಹಿತ ಸ್ವಾತಂತ್ರ್ಯ**
**ದಿಗ್ಭ್ರಾಂತ ಚೇತನದಂತೆ.....**

**ಬದುಕು, ಸ್ವಾತಂತ್ರ್ಯ, ವಿವೇಕ**
**ಒಂದರೊಳಗೆ ಮೂರೂ ಮುಪ್ಪುರಿ**
**ಶಾಶ್ವತ ಅನಂತ ಅಮರ.**

ಖಲೀಲ್ ಗಿಬ್ರಾನ್ ಮಾನವನ ಬದುಕಿನ ಅರ್ಥವನ್ನು ಸ್ವಾತಂತ್ರ್ಯ ವಿವೇಕದೊಂದಿಗೆ ಸಮೀಕರಿಸಿದ್ದಾನೆ. ಪರಪೀಡನೆಯಿಂದ ಮುಕ್ತವಾಗಿರುವುದೇ ಬದುಕಾಗಿದೆ. ಆಧುನಿಕತೆಯು ಮನುಷ್ಯನನ್ನು ಅತ್ಯಂತ ನಿರಾಶದಾಯಕ, ಅಸಹನೀಯ ಕಾರ್ಯಕಲಾಪಗಳತ್ತ ಸೆಳೆದು ಸಮೂಹ ಮಾಧ್ಯಮದ ಅತಿರೇಕಗಳನ್ನೇ ಸತ್ಯವೆಂದು ತಿಳಿದು ಬದುಕನ್ನು ಅನರ್ಥಕ್ಕೆ ಗುರಿಗೊಳಿಸುತ್ತಲಿದೆ. ಪ್ರದೇಶ, ಧರ್ಮ, ಜಾತಿ, ಅಧಿಕಾರ, ಸಂಪತ್ತಿನ ನೆಪದೊಳಗೆ ಮನುಷ್ಯನ ಬದುಕನ್ನೇ ಕಸಿದುಕೊಂಡಿದೆ. ಭಯೋತ್ಪಾದನೆ ಸಾಮೂಹಿಕ ಹತ್ಯೆ, ಯುದ್ಧ, ಅತಂಕವಾದವುಗಳೆಲ್ಲವೂ ಮನುಷ್ಯನ ಬದುಕಾಗಲಾರವೆಂಬ ವಿವೇಕವು ಸಾರ್ವತ್ರಿಕ ಗೊಳ್ಳಬೇಕಿದೆ. ಮಾನವನ ಸ್ವಾತಂತ್ರ್ಯ, ಸೌಹಾರ್ದತೆ, ಸತ್ಸಂಗ, ಸಹೋದರತೆಯನ್ನೇ ನಂಬಿ ನಡಾವಳಿಗಳಲ್ಲಿ ರೂಪಿಸಿಕೊಳ್ಳುವುದೇ ಬದುಕು, ಬದುಕಿನ ಅರ್ಥವಾಗಿದೆ.







ಶರಣಾಂಜಲಿ

# ಶ್ರೀ ಹೆಚ್.ಬಿ. ಗಂಗಾಧರಯ್ಯನವರು



ಸರಳತೆ, ಸಜ್ಜನಿಕೆ, ಕ್ರಿಯಾಶೀಲತೆ, ಕರ್ತವ್ಯ ನಿಷ್ಠೆಯನ್ನು ಮೈಗೂಡಿಸಿಕೊಂಡಿದ್ದ ಶ್ರೀ ಹೆಚ್.ಬಿ. ಗಂಗಾಧರಯ್ಯನವರು ಕಳೆದ ಅನೇಕ ದಶಕಗಳಿಂದ ಸಿದ್ಧಗಂಗಾ ಮಾಸಪತ್ರಿಕೆಯ ಪ್ರಕಾಶಕರಾಗಿ, ಪತ್ರಿಕೆಯ ಸರ್ವತೋಮುಖ ಬೆಳವಣಿಗೆಗೆ ಪ್ರಾಮಾಣಿಕವಾಗಿ, ಅನುಪಮ ಸೇವೆ ಸಲ್ಲಿಸಿದ್ದರು. ನಡೆದಾಡುವ ದೇವರು, ಪದ್ಮಭೂಷಣ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು ಹಾಗೂ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳವರ ಬಗ್ಗೆ ಅಪಾರವಾದ ಭಕ್ತಿ, ಗೌರವವನ್ನಿಟ್ಟುಕೊಂಡಿದ್ದ, ಶ್ರೀಯುತರು ಅಕ್ಟೋಬರ್ ೨೯, ೨೦೧೮ ರಂದು ಲಿಂಗೈಕ್ಯರಾದರು. ಅವರಿಗೆ ೮೩ ವರ್ಷವಾಗಿತ್ತು.

ಬೆಂಗಳೂರು ಗ್ರಾಮಾಂತರ ಜಿಲ್ಲೆ, ದೊಡ್ಡಬಳ್ಳಾಪುರ ತಾಲ್ಲೂಕು ದೊಡ್ಡಹೆಜ್ಜಾಜಿ ಗ್ರಾಮದ ಶರಣ ದಂಪತಿಗಳಾದ ಶ್ರೀ ಬಾಳಸಂಗಯ್ಯ ಹಾಗೂ ಶ್ರೀಮತಿ ನಿಂಗಮ್ಮ ದಂಪತಿಗಳ ಸುಪುತ್ರರಾಗಿ ಏಪ್ರಿಲ್ ೫, ೧೯೩೭ ರಲ್ಲಿ ಜನಿಸಿದರು. ಸ್ವಗ್ರಾಮದಲ್ಲಿ ಪ್ರಾಥಮಿಕ ಶಿಕ್ಷಣವನ್ನು, ಪ್ರೌಢಶಿಕ್ಷಣವನ್ನು ತ್ಯಾಮಗೊಂಡ್ಲುವಿನ ಮುನಿಸಿಪಲ್ ಪ್ರೌಢಶಾಲೆಯಲ್ಲಿ, ಪದವಿಪೂರ್ವ ಹಾಗೂ ಪದವಿಶಿಕ್ಷಣವನ್ನು ತುಮಕೂರು ಸರ್ಕಾರಿ ಪದವಿ ಕಾಲೇಜಿನಲ್ಲಿ, ಮೈಸೂರು ವಿಶ್ವವಿದ್ಯಾಲಯದಿಂದ ಬಿ.ಎಡ್. ಪದವಿಯನ್ನು ಪಡೆದರು.

ಶರಣೆ ಭ್ರಮರಾಂಬಿಕೆಯನ್ನು ಕೈಹಿಡಿಯುವುದರ ಮೂಲಕ ಗೃಹಸ್ಥಾಶ್ರಮವನ್ನು ಸ್ವೀಕರಿಸಿದ ಶ್ರೀ ಹೆಚ್.ಬಿ. ಗಂಗಾಧರಯ್ಯನವರದು ಆದರ್ಶ ಕುಟುಂಬ. ಆರುತಿಗೆ ಮೂರು ಹೆಣ್ಣು ಮಕ್ಕಳು, ಕೀರ್ತಿಗೆ ಒಬ್ಬ ಮಗ. ಮಕ್ಕಳನ್ನು ಸುಸಂಸ್ಕೃತರನ್ನಾಗಿ ಬೆಳೆಸುವ ಮೂಲಕ ಆದರ್ಶ ತಂದೆ ಎಂಬ ಹೆಗ್ಗಳಿಕೆಗೆ ಪಾತ್ರರಾಗಿದ್ದರು.

ಶ್ರೀ ಸಿದ್ಧಗಂಗಾ ವಿದ್ಯಾ ಸಂಸ್ಥೆಯಲ್ಲಿ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಕೃಪಾಶೀರ್ವಾದದಿಂದ ಪ್ರೌಢಶಾಲೆಯಲ್ಲಿ ಶಿಕ್ಷಕರಾಗಿ ವೃತ್ತಿಜೀವನವನ್ನು ಆರಂಭಿಸಿದ ಶ್ರೀಯುತರು, ಮುಖ್ಯಶಿಕ್ಷಕರಾಗಿ, ಶ್ರೀ ಬಸವೇಶ್ವರ ಶಿಕ್ಷಣ ತರಬೇತಿ ಸಂಸ್ಥೆಯ ಪ್ರಾಚಾರ್ಯರಾಗಿ, ದಕ್ಷತೆಯಿಂದ, ಪ್ರಾಮಾಣಿಕವಾಗಿ ಸೇವೆ ಸಲ್ಲಿಸಿದ್ದರು. ಅವರ ನಿವೃತ್ತಿ ನಂತರವೂ ಶ್ರೀಮಠದ ಸೇವೆಗೆ ತಮ್ಮನ್ನು ಅರ್ಪಿಸಿಕೊಂಡಿದ್ದರು.

ಪರಮಪೂಜ್ಯ ಶ್ರೀ ಶ್ರೀಗಳವರ ದೂರದೃಷ್ಟಿಯಿಂದ ಪ್ರಾರಂಭವಾದ ಶ್ರೀ ಸಿದ್ಧಲಿಂಗೇಶ್ವರ ನಾಟಕ ಮಂಡಳಿಯ ವತಿಯಿಂದ ಪ್ರದರ್ಶನಗೊಳ್ಳುತ್ತಿದ್ದ ಶ್ರೀ ಜಗಜ್ಯೋತಿ ಬಸವೇಶ್ವರ ನಾಟಕದಲ್ಲಿ ಬಿಜ್ಜಳನ ಪಾತ್ರ ಮಾಡುವುದರ ಮೂಲಕ ಒಬ್ಬ ಪ್ರತಿಭಾವಂತ ನಟನೆಂಬುದನ್ನು ಸಾಬೀತುಪಡಿಸಿದ್ದರು. ಅವರೊಳಗೆ ಸುಪ್ತವಾಗಿದ್ದ ಕಲೆ ಪ್ರಕಾಶಗೊಳ್ಳಲು ಅವಕಾಶ ಮಾಡಿಕೊಟ್ಟ ಪರಮಪೂಜ್ಯ ಶ್ರೀಗಳವರನ್ನು ಭಕ್ತಿಯಿಂದ ಸದಾ ಸ್ಮರಿಸುತ್ತಿದ್ದರು.

ಶ್ರೀ ಹೆಚ್.ಬಿ. ಗಂಗಾಧರಯ್ಯ ಅವರ ಅಗಲಿಕೆಯಿಂದ ವಿಶೇಷವಾಗಿ ಸಿದ್ಧಗಂಗಾ ಮಾಸಪತ್ರಿಕೆಗೆ ಭರಿಸಲಾಗದ ನಷ್ಟವಾಗಿದೆ. ಅವರ ಆತ್ಮಕ್ಕೆ ಚಿರಶಾಂತಿಯನ್ನು, ಅವರ ಕುಟುಂಬದವರಿಗೆ ಅಗಲಿಕೆಯ ನೋವನ್ನು ಸಹಿಸುವ ಶಕ್ತಿಯನ್ನು ಬಸವಾದಿ ಶರಣರು ಹಾಗೂ ಶ್ರೀ ಸಿದ್ಧಗಂಗಾ ಗುರುಪರಂಪರೆ ಅನುಗ್ರಹಿಸಲೆಂದು 'ಸಿದ್ಧಗಂಗಾ' ಶ್ರದ್ಧೆಯನ್ನರ್ಪಿಸುತ್ತದೆ.

## ಕ್ಷೇತ್ರವಾರ್ತೆ

# ೧೯೮೫-೮೬ನೇ ಸಾಲಿನಲ್ಲಿ ಟಿಸಿಹೆಚ್ ವಿದ್ಯಾಭ್ಯಾಸ ಮಾಡಿದ ಪ್ರಶಿಕ್ಷಣಾರ್ಥಿಗಳ ಗುರುವಂದನಾ ಮತ್ತು ಸ್ನೇಹ ಸಮ್ಮಿಲನ



ಅಕ್ಟೋಬರ್ ೨೦, ರಂದು ಶ್ರೀ ಬಸವೇಶ್ವರ ಶಿಕ್ಷಕ ತರಬೇತಿ ಸಂಸ್ಥೆಯ ಇತಿಹಾಸದಲ್ಲಿ ಒಂದು ಸಂಭ್ರಮದ ವಾತಾವರಣ. ಚಿರಸ್ಮರಣೀಯ ದಿನ. ೧೯೮೫-೮೬ನೇ ಸಾಲಿನಲ್ಲಿ ಶಿಕ್ಷಕ ತರಬೇತಿ ಪಡೆದು ಶಿಕ್ಷಕರಾಗಿ ಸೇವೆ ಸಲ್ಲಿಸುತ್ತಿರುವ ಶಿಕ್ಷಣಾರ್ಥಿಗಳಿಂದ ಗುರುವಂದನಾ ಹಾಗೂ ಸ್ನೇಹ ಸಮ್ಮಿಲನ ಸಂಭ್ರಮದ ಕಾರ್ಯಕ್ರಮ ಆಯೋಜಿಸಿದ್ದು ಅನ್ನ, ಆಶ್ರಯ ನೀಡಿ ಶಿಕ್ಷಣಕ್ಕೆ ಅನುಕೂಲ ಮಾಡಿಕೊಟ್ಟ ಶ್ರೀಮಠವನ್ನು ಕೃತಜ್ಞತೆಯಿಂದ ಸ್ಮರಿಸಿ ಪೂಜ್ಯ ಡಾ॥ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರಿಗೆ ಗುರುವಂದನೆ, ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳವರಿಗೆ ಭಕ್ತಿಸಮರ್ಪಣೆ ಹಾಗೂ ಉಪನ್ಯಾಸಕ ವೃಂದವನ್ನು, ಸಿಬ್ಬಂದಿಯವರನ್ನು ಸನ್ಮಾನಿಸಿದರು.

ಅಂದಿನ ಸಮಾರಂಭದಲ್ಲಿ ಪ್ರಾಸ್ತಾವಿಕ ನುಡಿಗಳನ್ನಾಡಿದ ಶಿಕ್ಷಕ ಎಸ್. ಶಿವಕುಮಾರ್ ಅವರು ಶ್ರೀಮಠ ಕಡುಬಡತನದಿಂದ ಬಂದ ಮಕ್ಕಳಿಗೆ ಅನ್ನ ಆಶ್ರಯ ವಿದ್ಯೆ, ಸಂಸ್ಕಾರ, ಸಾಮಾಜಿಕ, ಧಾರ್ಮಿಕ ಶಿಕ್ಷಣ ಜೊತೆಗೆ ವ್ಯಕ್ತಿತ್ವ ರೂಪಿಸಿಕೊಳ್ಳಲು ಅವಕಾಶ ಕಲ್ಪಿಸಿಕೊಟ್ಟ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರಿಗೆ ನಾವು ಚಿರಋಣಿಗಳು ಹಾಗೂ ಮನೆಯಲ್ಲಿ ಒಂದು ಹೊತ್ತಿನ ಊಟಕ್ಕೂ ತೊಂದರೆ ಇದ್ದ ಸಹಸ್ರಾರು ಕುಟುಂಬದ ಮಕ್ಕಳಿಗೆ ಶ್ರೀಮಠ ಕಲ್ಪವೃಕ್ಷದಂತೆ, ಪೂಜ್ಯರು ತಂದೆ ತಾಯಿ ಬಂಧು ಬಳಗದಂತೆ ಪೋಷಿಸಿ, ರಕ್ಷಿಸಿ ನಾವು ಶಿಕ್ಷಕರಾಗಲು ನೆರವು ನೀಡಿದ್ದಾರೆ ಎಂಬ ಮಾತುಗಳು ಎಲ್ಲರ ಮನಮುಟ್ಟುವಂತಿದ್ದು, ಸಮಾವೇಶಗೊಂಡಿದ್ದ ಎಲ್ಲರ ನೇತ್ರಗಳು ತೇವವಾದವು. ಅದೊಂದು ಅಭೂತಪೂರ್ವ ಕ್ಷಣ. ಪೂರ್ವಜನ್ಮದ ಪುಣ್ಯದಿಂದ ಈ ಸುಕ್ಷೇತ್ರದಲ್ಲಿ ಶಿಕ್ಷಣ ಪಡೆದು ಶಿಕ್ಷಕ ವೃತ್ತಿಯನ್ನು ಪಡೆದು ನಾವು ಜೀವನ ನಡೆಸುತ್ತಿದ್ದೇವೆ. ಇದಕ್ಕೆಲ್ಲ ಪೂಜ್ಯರ ಆಶೀರ್ವಾದವೇ ಕಾರಣ ಎಂದರು. ಶ್ರೀ ಎಸ್. ಶಿವಕುಮಾರ್ ಶಿಕ್ಷಕರು, ಸರ್ಕಾರಿ ಪದವಿಪೂರ್ವ ಕಾಲೇಜು (ಪ್ರೌಢಶಾಲಾ ವಿಭಾಗ) ಕೊರಟಗೆರೆ, ತುಮಕೂರು ಜಿಲ್ಲೆ ಇವರ ಅಂತರಾಳದ ಮಾತುಗಳು ಸ್ಮರಣೀಯವಾದವು.

ಪ್ರಪ್ರಥಮವಾಗಿ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳ ಪಾದಗಳಿಗೆ ಭಕ್ತಿಪೂರ್ವಕ ನಮಸ್ಕಾರ ಮಾಡುತ್ತ, ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳ ಪಾದಗಳಿಗೆ ಭಕ್ತಿಪೂರ್ವಕ ನಮಸ್ಕಾರಗಳನ್ನು ಮಾಡುತ್ತ ಎಲ್ಲಾ ನಮ್ಮ ಆಹ್ವಾನ ಗುರುವೃಂದದ ಪಾದಗಳಿಗೆ ನಮಸ್ಕರಿಸುತ್ತ ಹಾಲಿ ಈಗ ಈ ಸಂಸ್ಥೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಉಪನ್ಯಾಸಕರು ಹಾಗೂ ಸಿಬ್ಬಂದಿ ವರ್ಗದವರಿಗೆ ನಮಸ್ಕರಿಸುತ್ತ, ಈ ಕಾರ್ಯಕ್ರಮದಲ್ಲಿ ಭಾಗವಹಿಸಿರುವ ನನ್ನ ಎಲ್ಲಾ ಸನ್ಮಿತ್ರರಿಗೂ ಅವರ ಕುಟುಂಬ ವರ್ಗದವರಿಗೂ ನನ್ನ ನಮಸ್ಕಾರಗಳು.

ನಾವೆಲ್ಲರೂ ೧೯೮೪-೮೫ ಮತ್ತು ೧೯೮೫-೮೬ರಲ್ಲಿ ಟಿ.ಸಿ.ಹೆಚ್. ವಿದ್ಯಾಭ್ಯಾಸ ಮಾಡಿದ ಹಾಗೂ ಹಾಲಿ ಶಿಕ್ಷಕ ವೃತ್ತಿಯಲ್ಲಿರುವ ಗೆಳೆಯರಾಗಿದ್ದೇವೆ. ನಮ್ಮ ಜೊತೆಗೆ ಇದೇ ಸಂಸ್ಥೆಯಲ್ಲಿ ಅಧ್ಯಯನ ಮಾಡಿದ ನಮಗಿಂತ ಹಿರಿಯ ಹಾಗೂ ಕಿರಿಯ ಕೆಲವು ಸನ್ಮಿತ್ರರೂ ಕೂಡ ಈ ಕಾರ್ಯಕ್ರಮದ ಆಯೋಜನೆಯಲ್ಲಿ ನಮ್ಮ ಜೊತೆಗಿದ್ದಾರೆ.

ನಮ್ಮಲ್ಲೇ ಇರುವ ಕೆಲವು ಮಿತ್ರರಾದ ಪ್ರಕಾಶ್, ಪುಟ್ಟರಾಜು, ಪದ್ಮಾಜಿರಾವ್, ಶ್ರೀನಿವಾಸ್, ಮಂಜುನಾಥ ಇನ್ನೂ ಮುಂತಾದ ಗೆಳೆಯರ ಆಲೋಚನೆಯ ಪ್ರತಿರೂಪವೇ ಈ ಕಾರ್ಯಕ್ರಮ.



ಈ ಕಾರ್ಯಕ್ರಮದಲ್ಲಿ ಭಾಗವಹಿಸುವುದು ನಮಗೆ ಖುಷಿಯ ಹಾಗೂ ಹೆಮ್ಮೆಯ ವಿಚಾರ. ಏಕೆಂದರೆ ಸಿದ್ಧಗಂಗಾ ಶ್ರೀಗಳು ಮತ್ತು ಶ್ರೀ ಸಿದ್ಧಗಂಗಾ ಮಠವನ್ನು ನಮ್ಮ ಬದುಕಿನಲ್ಲಿ ಮರೆಯಲು ಸಾಧ್ಯವೇ ಇಲ್ಲ. ಏಕೆಂದರೆ ಮಠ ನಮ್ಮನ್ನು ಸಮಾಜ ಅಪೇಕ್ಷಿಸುವ ಮಾನವರಾಗಲು ನೆರವಾಗಿದೆ.

ನಮ್ಮ ಸಂವಿಧಾನದ ಮೌಲ್ಯಗಳನ್ನು ನಾವು ಆಚರಣೆಗಿಳಿಸಿ, ಅರ್ಥಮಾಡಿಕೊಂಡು ಮೈಗೂಡಿಸಿ ಕೊಳ್ಳುವ ಅವಕಾಶವನ್ನು ಶ್ರೀಮಠ ನಮಗೆ ಒದಗಿಸಿತು. ಕಾಯಕ ಮಾಡಿ ಬದುಕಬೇಕೆಂದು, ನಡೆ-ನುಡಿ ಹೇಗಿರಬೇಕೆಂದು ತಾನೂ ಬದುಕಿ ಇತರರನ್ನೂ ಬದುಕಲು ಬಿಡಬೇಕೆಂದು, ಸಕರಲ್ಲೂ ಲೇಸನ್ನೇ ಬಯಸಬೇಕೆಂದು ಸಮಾಜದಲ್ಲಿ ಯಾರನ್ನೂ ನಿರಾಕರಿಸದೆ ಎಲ್ಲರನ್ನೂ ಸ್ವೀಕರಿಸಬೇಕೆಂದು, ಸಹಜವಾಗಿರಬೇಕೆಂದು, ಮುಕ್ತವಾಗಿರಬೇಕೆಂದು, ಕೋಪಗೊಳ್ಳದೆ ತಾಳ್ಮೆಯ ಬದುಕನ್ನು ಬದುಕಬೇಕೆಂದು, ಬದುಕನ್ನು ಧೈರ್ಯದಿಂದ ಎದುರಿಸುವುದು ಹೇಗೆಂದು ಕಲಿಸುವುದರ ಜೊತೆಗೆ ಗೌರವಯುತ ಬದುಕನ್ನು, ಬದುಕನ್ನು ಬದುಕಲು ಅಗತ್ಯ ತಿಳುವಳಿಕೆಯನ್ನು ಬದುಕಿನಲ್ಲಿ ಅರಿಯುವ, ವಿಮರ್ಶೆ ಮಾಡುವ ತುಲನೆ ಮಾಡಿ ನಿರ್ಣಯಿಸುವ ಸಾಮರ್ಥ್ಯವನ್ನು ಹೊಂದಲು, ಅತ್ಯಂತ ಚಿಕ್ಕವನನ್ನಾಗಿ ನನ್ನನ್ನು ನಾನು ಕಂಡುಕೊಳ್ಳಲು, ನುಡಿದಂತೆ ನಡೆಯಲು, ಸಕಲ ಜೀವಿಗಳನ್ನೂ ಪ್ರೀತಿಸುವುದನ್ನು, ಸಾಮಾಜೀಕರಣ ಗೊಳ್ಳುವುದನ್ನು, ಹಿರಿಯರಿಗೆ ಗೌರವ ಕೊಡುವುದನ್ನು, ಮಾನವನಾಗುವುದಕ್ಕಿಂತ ಮಾನವೀಯ ವಾಗುವುದನ್ನು ಹೀಗೆ ಬದುಕು ಅರ್ಥಪೂರ್ಣವಾಗಲು ಅಗತ್ಯವಾಗಿ ಬೇಕಾದ ಎಲ್ಲಾ ಗುಣಗಳನ್ನು ಆಚರಿಸುತ್ತಾ ಅರ್ಥಮಾಡಿಕೊಂಡು ಕಲಿಯುವ ಅವಕಾಶವನ್ನು ನಮಗೆ ಇಲ್ಲಿನ ಸ್ವಾಮೀಜಿಗಳು ಹಾಗೂ ಶ್ರೀಮಠದ ಪರಿಸರ ಒದಗಿಸಿಕೊಟ್ಟಿತು. ಇದನ್ನು ನಾವು ಹೆಮ್ಮೆಯಿಂದ ಹಾಗೂ ಖುಷಿಯಿಂದ ಹೇಳಿಕೊಳ್ಳಬಯಸುತ್ತೇವೆ.

ಸ್ವಾಮೀಜಿಗಳು ನಮ್ಮಿಂದ ಯಾವ ನಿರೀಕ್ಷೆಯನ್ನೂ ಬಯಸದೆ ಉಚಿತವಾಗಿ ನಮಗೆ ವಿದ್ಯಾಭ್ಯಾಸ ಮಾಡಲು ಅವಕಾಶ ಮಾಡಿಕೊಟ್ಟಿದ್ದು ನಮ್ಮ ಪುಣ್ಯವೇ ಸರಿ. ನಿಮಗೆಲ್ಲ ಆಶ್ಚರ್ಯ ಅನಿಸಬಹುದು! ೨ ವರ್ಷದ ನನ್ನ ಎಲ್ಲಾ ಖರ್ಚುಗಳೂ ಸೇರಿ ೩೦೦೦/-ರೂಪಾಯಿಗಳಲ್ಲಿ ನಾನು ನನ್ನ ಟಿಸಿಹೆಚ್ ವಿದ್ಯಾಭ್ಯಾಸವನ್ನು ಮುಗಿಸಿದೆ. ಕಡುಬಡತನದಿಂದ ಬಂದ ಅನೇಕ ವಿದ್ಯಾರ್ಥಿಗಳು ನಾವಾಗಿದ್ದೆವು. ನಮ್ಮ ಮನೆಗಳಲ್ಲಿ ಅನ್ನವನ್ನೇ ಕಾಣದ ನಾವು ಶ್ರೀಮಠದಲ್ಲಿ ಹೊಟ್ಟೆತುಂಬಾ ಅನ್ನ ಉಂಡದ್ದನ್ನು ಮರೆಯುವುದಾದರೂ ಹೇಗೆ ?

ನಾವು ಟಿಸಿಹೆಚ್ ಮಾಡುತ್ತಿದ್ದ ಸಂದರ್ಭದಲ್ಲಿ ಶ್ರೀ ಶಿವಕುಮಾರ ಬುದ್ಧಿಯವರಿಗೆ ೭೯-೮೦ ವರ್ಷ ವಯಸ್ಸು. ಆದರೂ ನಮ್ಮ ಜೊತೆ ಶ್ರಮದಾನದಲ್ಲಿ ಭಾಗವಹಿಸುತ್ತಿದ್ದರು. ಅವರ ಜೊತೆ ಕೆಲಸ, ಶ್ರಮದಾನ ಮಾಡಿದ್ದನ್ನು ನಾವು ಮರೆಯುವುದಾದರೂ ಹೇಗೆ ?

ನಮ್ಮ ಶ್ರಮದಾನ ಅಂದು ಶ್ರೀಮಠಕ್ಕೆ ಅನಿವಾರ್ಯವೇ ಆಗಿದ್ದಿರಬಹುದು. ಆದರೆ ಆ ಶ್ರಮದಾನ ನಮಗೆ ಕಲಿಸಿದ ಪಾಠವನ್ನು ಮರೆಯುವುದಾದರೂ ಹೇಗೆ? ಹೊಲ ಕೊಯ್ಯುವ, ಗದ್ದೆ ಕೊಯ್ಯುವ, ಹೊರೆಕಟ್ಟುವ, ಕಲ್ಲುಹೊರುವ, ಕಳೆ ಕೀಳುವ ಸಮಯದಲ್ಲಿ ನಮಗಾದ ಅನುಭವಗಳನ್ನು ಮರೆಯುವುದಾದರೂ ಹೇಗೆ? ಅದೇನೆ ಇರಲಿ ದೈಹಿಕ ಶ್ರಮದ ಮಹತ್ವವನ್ನು ಶ್ರಮ ಸಂಸ್ಕೃತಿಯನ್ನು ಆಚರಿಸುವ ಮನಸ್ಥಿತಿಯನ್ನು ನಮ್ಮಲ್ಲಿ ಉಂಟುಮಾಡಿದ ಶ್ರೀಗಳನ್ನು, ಶ್ರೀಮಠವನ್ನು ಮರೆಯಲು ಸಾಧ್ಯವೇ ಇಲ್ಲ. ನಮ್ಮ ಅವಶ್ಯಕತೆಗಳನ್ನು ನಾವು ನಿರ್ವಹಿಸಿಕೊಳ್ಳಲು ಬೇಕಾದ ಎಲ್ಲಾ ಕೌಶಲಗಳನ್ನು ನಾವಿಲ್ಲಿ ಕಲಿತೆವು.

ನಾವು ಟಿಸಿಹೆಚ್ ಮಾಡಿದ್ದರಿಂದ ನಮಗೆ ಶಿಕ್ಷಕರ ಕೆಲಸ ಸಿಕ್ಕಿದೆ. ಅದು ಸಿಗದಿದ್ದರೂ ನಾವು ಗೌರವಯುತ ಬದುಕನ್ನು ಬದುಕಲು ಬೇಕಾದ ಮಾನಸಿಕ ಪ್ರಭುದ್ಧತೆಯನ್ನು, ಕುಶಲತೆಯನ್ನು ಶ್ರೀಮಠ ನಮಗೆ ಆಗಲೇ ನೀಡಿತ್ತು. ಕರ್ತವ್ಯನಿಷ್ಠೆ, ಸಮಾನತೆ, ನ್ಯಾಯ, ಸ್ವಾತಂತ್ರ್ಯ ಮೊದಲಾದ ಸಂವಿಧಾನದ ಮೌಲ್ಯಗಳನ್ನು ಪಾಠ ಮಾಡಿ ಕಲಿಸುವುದಕ್ಕಿಂತ ಅವುಗಳನ್ನು ಆಚರರಣೆಗಿಳಿಸಿ ಕಲಿಯುವ ಅವಕಾಶ ನಮಗೆ ಅಂದು ದೊರಕಿತ್ತು.

ಛಲಬೇಕು ಶರಣಂಗೆ ಪರಧನವನೊಲ್ಲೆನೆಂಬ, ಛಲಬೇಕು ಶರಣಂಗೆ ಪರಸತಿಯನೊಲ್ಲೆನೆಂಬ ವಚನದಂತೆ ಜೀವನ ಮೌಲ್ಯಗಳನ್ನು ಇಲ್ಲಿ ಕಲಿಯುವುದರ ಜೊತೆಗೆ ಗುರುಕಾರುಣ್ಯವೇ ಸದಾಚಾರ, ಗುರುಕಾರುಣ್ಯವೇ ಶಿವಾಚಾರ, ಗುರುಕಾರುಣ್ಯವೇ ಪ್ರಸಾದರುಚಿ, ಮುಂದೆ ಗುರು ಹಿಂದೆ ಲಿಂಗ ಕೂಡಲಸಂಗಮದೇವ.

ಇಂತ ಗುರುಕಾರುಣ್ಯ ನಮಗಿರಲು ಅದನ್ನು ಸ್ಮರಿಸಿಕೊಳ್ಳುವ ಅವಕಾಶವನ್ನು ನಾವೆಲ್ಲರೂ ಸೇರಿ






ಮಾಡಿಕೊಂಡಿದ್ದೇವೆ. ನಾವೆಲ್ಲರೂ ಸೇರಿದಾಗ ಮುಖ ಗುರ್ತು ಸಿಗದೆ ಇವನಾರು? ಇವನಾರು? ಎಂದೆವು ಪರಿಚಯ ಸಿಕ್ಕಿದ ಮೇಲೆ ಇವನಮ್ಮವ, ಇವನಮ್ಮವ ಎಂದು ಆಲಂಗಿಸಿಕೊಂಡೆವು. ಈ ಮೂಲಕ ನಾವೆಲ್ಲಾ ಸೇರಿ ಗುರುಕಾರುಣ್ಯವನ್ನು ಪಡೆಯಲು ಬಯಸಿ ಸ್ವಾಮೀಜಿಯವರಲ್ಲಿ ಭಿನ್ನವಿಸಿಕೊಂಡಾಗ ನಮಗೆ ಕೃಪೆಮಾಡಿ ಆಶೀರ್ವದಿಸಿ ಅವಕಾಶ ಮಾಡಿಕೊಟ್ಟಿದ್ದಾರೆ. ಈ ಸಂದರ್ಭದಲ್ಲಿ ಡಾ. ಶ್ರೀ ಶ್ರೀ ಶಿವಕುಮಾರಮಹಾ ಸ್ವಾಮೀಜಿಗಳನ್ನು ಮತ್ತು ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳಿಗೆ ಗುರುವಂದನೆ ಮಾಡುವ ಮೂಲಕ ಭಕ್ತಿ ಸಮರ್ಪಣೆ ಮಾಡುವುದರ ಜೊತೆಗೆ ನಮಗೆ ಶಿಕ್ಷಕರಾಗಲು ತರಬೇತಿ ನೀಡಿದ ನಮ್ಮ ಎಲ್ಲಾ ಗುರುಗಳನ್ನು ನೆನೆಯುತ್ತಾ ಹಾಗೂ ಈಗ ಹಾಲಿ ಇರುವ ಇದೇ ಸಂಸ್ಥೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಇದೇ ಸಂಸ್ಥೆಯ ಸಿಬ್ಬಂದಿ ವರ್ಗದವರಿಗೂ ಗೌರವ ಸಮರ್ಪಣೆ ಮಾಡುವುದು ಈ ಕಾರ್ಯಕ್ರಮದ ಉದ್ದೇಶ. ಜೊತೆಗೆ ಶ್ರೀಮಠದ ದಾಸೋಹ ನಿಧಿಗೆ ನಮ್ಮ ಕಿರುಕಾಣಿಕೆಯನ್ನೂ ಸಮರ್ಪಿಸುವುದು ಆಗಿದೆ.

ಈ ಕಾರ್ಯಕ್ರಮದಲ್ಲಿ ಭಾಗವಹಿಸುತ್ತಿರುವ ಎಲ್ಲರಿಗೂ ಅನಂತ ನಮಸ್ಕಾರಗಳನ್ನು ಮಾಡುತ್ತ ನನಗೆ ಪ್ರಾಸ್ತಾವಿಕವಾಗಿ ಮಾತನಾಡಲು ಅವಕಾಶ ನೀಡಿದ ನಿಮಗೆಲ್ಲರಿಗೂ ವಂದಿಸುತ್ತಾ ನನ್ನ ಪ್ರಾಸ್ತಾವಿಕ ನುಡಿಗಳನ್ನು ಅಂತಿಮಗೊಳಿಸುತ್ತೇನೆ.

ಈ ಸಮಾರಂಭದಲ್ಲಿ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗಮಹಾಸ್ವಾಮಿಗಳವರು ದಿವ್ಯಸಾನ್ನಿಧ್ಯವನ್ನು ವಹಿಸಿ ಆಶೀರ್ವಚನ ನೀಡುತ್ತಾ ಶಿಕ್ಷಣ ಕೆಲಸ ಏಣಿ, ದೋಣಿಯಂತೆ ವೃತ್ತಿ ಪಾವಿತ್ರ್ಯದ ಜೊತೆಗೆ ಜವಾಬ್ದಾರಿಯುತವಾಗಿ ಕರ್ತವ್ಯ ನಿರ್ವಹಿಸಬೇಕು. ದೇಶದ ಭವಿಷ್ಯ ರೂಪಿಸುವುದು ಶಿಕ್ಷಕರ ಕೈಯಲ್ಲಿದೆ. ಶಿಕ್ಷಕ ವೃತ್ತಿ ಅತ್ಯಂತ ಪವಿತ್ರವಾದುದು. ಶಿಕ್ಷಕರು ಸಮಾಜಕ್ಕೆ ಮಾದರಿಯಾಗಿರಬೇಕು. ಶಿಕ್ಷಕರು ಏಣಿ ದೋಣಿಯಂತಿರುತ್ತಾರೆ. ಏಣಿ ಮತ್ತೊಬ್ಬರನ್ನು ಮೇಲಕ್ಕೆ ಹತ್ತಿಸಿದರೆ ದೋಣಿ ದಡವನ್ನು ಮುಟ್ಟಿಸುತ್ತದೆ. ಶಿಕ್ಷಕರು ಮಾರ್ಗದರ್ಶನದ ಮೂಲಕ ದೇಶದ ಭವಿಷ್ಯ ರೂಪಿಸುತ್ತಾರೆ. ಗಡಿಯಲ್ಲಿ ಯೋಧರು ದೇಶ ರಕ್ಷಿಸಿದರೆ ಶಿಕ್ಷಕರು ಸುಭದ್ರ ದೇಶ ಕಟ್ಟುವ ಕಾಯಕ ಮಾಡಬೇಕಾಗಿದೆ. ಶ್ರೀ ಶ್ರೀ ಶಿವಕುಮಾರಮಹಾಸ್ವಾಮಿಗಳ ಆದರ್ಶ, ಸಮಾನತೆ, ಸಹಕಾರ, ಮಮತೆ, ಪ್ರೀತಿ ವಾತ್ಸಲ್ಯವನ್ನು ನೀವು ಮೈಗೂಡಿಸಿಕೊಂಡಿದ್ದೀರಿ ಎಂಬುದಕ್ಕೆ ನೀವು ಇಂದು ನಡೆಸಿಕೊಟ್ಟ ಕಾರ್ಯಕ್ರಮ ಸಾಕ್ಷಿಯಾಗಿದೆ. ಶ್ರೀಗಳು ನೀಡಿದ್ದ ಸಂದೇಶವನ್ನು ತಮ್ಮ ವೃತ್ತಿಜೀವನದಲ್ಲಿ ಅಳವಡಿಸಿಕೊಂಡಿರುವುದು ನಿಮ್ಮ ಔದಾರ್ಯವೆನಿಸಿದೆ ಎಂದು ನುಡಿದರು.

ಕಾರ್ಯಕ್ರಮದ ಅಧ್ಯಕ್ಷತೆ ವಹಿಸಿ ಮಾತನಾಡಿದ ನಿವೃತ್ತ ಪ್ರಾಂಶುಪಾಲರಾದ ಶ್ರೀ ಎಸ್. ಶಿವಕುಮಾರ್ ರವರು ಶಿಕ್ಷಕ ವೃತ್ತಿ ಗೌರವಯುತವಾದುದು. ಉತ್ತಮ ಸೇವೆ ಸಮಾಜಕ್ಕೆ ಅವಶ್ಯಕ. ಕರ್ತವ್ಯ ನಿಷ್ಠೆಯಿಂದ ಯಾವುದೇ ಅಧಿಕಾರಿಗಳಿಗೆ ಹೆದರಬೇಕಾಗಿಲ್ಲ. ವೃತ್ತಿಯನ್ನು ಅತಿಯಾಗಿ ಪ್ರೀತಿಸಿ ಗೌರವಿಸಿದರೆ ಯಶಸ್ಸು ಹಿಂಬಾಲಿಸುತ್ತದೆ ಎಂದರು.

ವರದಿ : **ಎಸ್. ಶಿವಕುಮಾರ್**
ನಿವೃತ್ತ ಪ್ರಾಂಶುಪಾಲರು






ವರದಿ

# ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರಿಂದ 'ಶಿವಾನುಭವಶಾಸ್ತ್ರ' ಗ್ರಂಥ ಲೋಕಾರ್ಪಣೆ

ನವೆಂಬರ್ ೨೩ರ ಸಂಜೆ ಬೆಂಗಳೂರು ನಗರದ ಪ್ರಸಿದ್ಧ ಮಠಗಳಲ್ಲಿ ಒಂದಾಗಿರುವ ಶ್ರೀ ಗುರುವಣ್ಣದೇವರ ಮಠದಲ್ಲಿ ಏರ್ಪಡಿಸಿದ್ದ ಕೃತ್ತಿಕ ದೀಪೋತ್ಸವ ಹಾಗೂ ಬಸವತತ್ತ್ವ ಚಿಂತನಾ ಸಮಾರಂಭ ಸಿದ್ಧಗಂಗಾ ಕ್ಷೇತ್ರಾಧ್ಯಕ್ಷರಾದ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರ ದಿವ್ಯಸಾನ್ನಿಧ್ಯದಲ್ಲಿ ನಡೆಯಿತು. ಸಮಾರಂಭದ ಅಂಗವಾಗಿ ಹೊರತಂದ ಶ್ರೀ ಚನ್ನಬಸವಣ್ಣನವರಿಂದ ವಿರಚಿತವಾದ ಶಿವಾನುಭವ ಶಾಸ್ತ್ರ ಗ್ರಂಥವನ್ನು ಗುರುವಣ್ಣದೇವರ ಮಠದ ಹಿರಿಯ ಶ್ರೀಗಳಾದ ಪರಮಪೂಜ್ಯ ಶ್ರೀ ಶ್ರೀ ಮಲ್ಲಿಕಾರ್ಜುನ ಮಹಾಸ್ವಾಮಿಗಳವರ ಅಧ್ಯಕ್ಷತೆಯಲ್ಲಿ ಏರ್ಪಸಿದ್ದರು.



ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರ ದಿವ್ಯಾಸಾನ್ನಿಧ್ಯದಲ್ಲಿ ಪೂಜ್ಯ ಮಹಾಪೌರರಾದ ಶ್ರೀಮತಿ ಗಂಗಾಂಬಿಕೆ ಮಲ್ಲಿಕಾರ್ಜುನ ಅವರು ಕಾರ್ಯಕ್ರಮವನ್ನು ಉದ್ಘಾಟಿಸಿದರು. ಈ ಸಂದರ್ಭದಲ್ಲಿ ಗುರುವಣ್ಣದೇವರ ಮಠದ ಪೂಜ್ಯ ಶ್ರೀ ಶ್ರೀ ನಂಜುಂಡ ಮಹಾಸ್ವಾಮಿಗಳುವರು ಹಾಗೂ ಹರಗುರು ಚರಮೂರ್ತಿಗಳು ಉಪಸ್ಥಿತರಿದ್ದರು

ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ಹರಗುರು ಚರಮೂರ್ತಿಗಳ ಸಮ್ಮುಖದಲ್ಲಿ ಲೋಕಾರ್ಪಣೆ ಮಾಡಿದರು. ಈ ಕೃತಿಯ ಮೊದಲ ಮುದ್ರಣ ಶ್ರೀ ಗುರುವಣ್ಣದೇವರ ಮಠದ ವತಿಯಿಂದ ೧೯೦೮ರಲ್ಲಿ ಮುದ್ರಣವಾಗಿತ್ತು. ಈಗ ಈ ಅಮೂಲ್ಯ ಗ್ರಂಥವನ್ನು ಶ್ರೀ ಗುರುವಣ್ಣದೇವರ ಮಠಾಧ್ಯಕ್ಷರಾದ ಪೂಜ್ಯ ಶ್ರೀ ಶ್ರೀ ನಂಜುಂಡ ಮಹಾಸ್ವಾಮಿಗಳವರ ಆಸಕ್ತಿಯ ಫಲವಾಗಿ ಮರುಮುದ್ರಣವಾಗಿದ್ದು, ಈ ಗ್ರಂಥವನ್ನು ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ದಿವ್ಯಚರಣಗಳಿಗೆ ಭಕ್ತಿಯಿಂದ ಸಮರ್ಪಿಸಲಾಗಿದೆ.

ಇದೇ ಸಂದರ್ಭದಲ್ಲಿ ಹಿರಿಯ ವಿದ್ವಾಂಸರಾದ ಕೋ.ರಂ. ಬಸವರಾಜು ರಚಿಸಿದ 'ಶ್ರೀ ಶಿವಕುಮಾರ ಶಿವಯೋಗೀಶ್ವರರ ಅಷ್ಟೋತ್ತರ ಶತನಾಮಾವಳಿ' ಕಿರುಕೃತಿಯನ್ನು ಲೋಕಾರ್ಪಣೆ ಮಾಡಲಾಯಿತು. ಸಮಾರಂಭವನ್ನು ಉದ್ಘಾಟನೆ ಮಾಡಿದ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ಪೂಜ್ಯ ಮಹಾಪೌರರಾದ ಶ್ರೀಮತಿ ಗಂಗಾಬಿಕೆ ಮಲ್ಲಿಕಾರ್ಜುನ ದಂಪತಿಗಳನ್ನು ಆತ್ಮೀಯವಾಗಿ ಸನ್ಮಾನಿಸಿ ಗೌರವಿಸಲಾಯಿತು. ಶಿವಾನುಭವಶಾಸ್ತ್ರ ಗ್ರಂಥ ಮರುಮುದ್ರಣವಾಗಲು ಸಹಕಾರ ನೀಡಿದ ಶ್ರೀ ಕೋ.ರಂ. ಬಸವರಾಜು ಹಾಗೂ ಹಿರಿಯ ಜಾನಪದ ವಿದ್ವಾಂಸರಾದ ಶ್ರೀ ಎಚ್.ಎಸ್. ಸಿದ್ಧಗಂಗಪ್ಪನವರನ್ನು ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳು ಸನ್ಮಾನಿಸಿ ಆಶೀರ್ವದಿಸಿದರು. ಗ್ರಂಥ ಕುರಿತು ಶ್ರೀ ಕೋ.ರಂ. ಬಸವರಾಜು ಅವರ ಪ್ರಾಸ್ತವಿಕ ನುಡಿಗಳನ್ನಾಡಿದರು. ಸುರಿಯುವ ಮಳೆಯಲ್ಲಿಯೂ ನೂರಾರು ಜನ ಭಕ್ತರು ಭಾಗವಹಿಸಿದ್ದು ವಿಶೇಷವಾಗಿತ್ತು.

ಸಮಾರಂಭ ವಚನ ಗಾಯನದೊಂದಿಗೆ ಪ್ರಾರಂಭವಾಯಿತು. ಬೆಟ್ಟಹಳ್ಳಿ ಮಠದ ಶ್ರೀಗಳು ಪ್ರಾಸ್ತಾವಿಕ ನುಡಿಗಳನ್ನಾಡಿದರು. ಶ್ರೀ ಕಂಚುಗಲ್ ಬಂಡೇಮಠದ ಪೂಜ್ಯ ಶ್ರೀ ಶ್ರೀ ಬಸವಲಿಂಗ ಮಹಾಸ್ವಾಮಿಗಳು ಶರಣು ಸಮರ್ಪಣೆ ಮಾಡಿದರು. ಶ್ರೀ ರುದ್ರೇಶ್ ಆದರಂಗಿ ಅವರು ಕಾರ್ಯಕ್ರಮ ನಡೆಸಿಕೊಟ್ಟರು.

## ದಾನಿಗಳ ಪಟ್ಟಿ

ಶ್ರೀ ಸಿದ್ಧಗಂಗಾ ಮಠ, ತುಮಕೂರು

ಶ್ರೀ ಸಿದ್ಧಗಂಗಾಮಠದ ನೀರು ಸರಬರಾಜು ಮತ್ತು ಒಳಚರಂಡಿ ವ್ಯವಸ್ಥೆಯ ಸಮಗ್ರ ಯೋಜನೆಗೆ
ಶ್ರೀ ಸಿದ್ಧಗಂಗಾ ಗುರುಕುಲ ಡೆವಲಪ್‌ಮೆಂಟ್ ಟ್ರಸ್ಟ್‌ಗೆ ದೇಣಿಗೆ ನೀಡಿದ ದಾನಿಗಳ ಪಟ್ಟಿ
ತಾವು ನೀಡುವ ಹಣಕ್ಕೆ ಆದಾಯ ತೆರಿಗೆ ಇಲಾಖೆಯಿಂದ ೮೦ಜಿ ಅಡಿಯಲ್ಲಿ ಶೇ. ೫೦ರವರೆಗೆ ತೆರಿಗೆ ವಿನಾಯಿತಿ ಇರುತ್ತದೆ.

| ಕ್ರಸಂ. | ಹೆಸರು ಮತ್ತು ಊರು | ಮೊತ್ತ |
|---|---|---|
| ೨೩೭೩. | ಶ್ರೀ ಟಿ.ಎನ್. ಈಶ್ವರಯ್ಯ<br>ಹೊಸೂರು | ೧,೨೫೧ |
| ೨೩೭೪. | ಶ್ರೀ ಜಿ.ಎನ್. ರಾಮರಾಧ್ಯ<br>ಟಿ. ಬೇಗೂರು | ೧,೦೦೦ |
| ೨೩೭೫. | ಶ್ರೀ ಕೆ.ಬಿ. ಸಿದ್ಧಲಿಂಗಯ್ಯ<br>ನೆಲಮಂಗಲ | ೧,೦೦೧ |
| ೨೩೭೬. | ಶ್ರೀ ಟಿ. ತಮ್ಮಯ್ಯ<br>ಹರಿವಣಪುರ | ೨,೦೦೦ |
| ೨೩೭೭. | ಶ್ರೀ ಕೆ.ಎಂ. ಜಗದೀಶ್<br>ಬೆಂಗಳೂರು | ೫,೦೦೧ |
| ೨೩೭೮. | ಶ್ರೀ ಬಿ.ಎಸ್. ಕಾಂತರಾಜು<br>ಹಾಸನ | ೧,೦೦೧ |
| ೨೩೭೯. | ಶ್ರೀ ಕೆ.ಪಿ. ಪುಟ್ಟಣ್ಣ<br>ಚಿಕ್ಕಮಗಳೂರು | ೧,೦೦೧ |
| ೨೩೮೦. | ಶ್ರೀ ಡಿ.ಬಿ. ನಂಜಪ್ಪ<br>ಬೆಂಗಳೂರು | ೧,೦೦೦ |
| ೨೩೮೧. | ಶ್ರೀ ಪ್ರಕಾಶ್<br>ಬೆಂಗಳೂರು | ೧,೦೦೧ |
| ೨೩೮೨. | ಶ್ರೀ ಎಂ. ಬಸವರಾಜಪ್ಪ<br>ಅರಬಿಳಚಿ | ೨,೦೦೦ |
| ೨೩೮೩. | ಡಾ॥ ಡಿ. ಬಸವರಾಜಯ್ಯ<br>ಬೆಂಗಳೂರು | ೧೦,೦೦೦ |
| ೨೩೮೪. | ಶ್ರೀ ಎಂ.ಎ. ರಾಜಯ್ಯ<br>ಹೊಳೆನರಸೀಪುರ | ೫೦೦ |
| ೨೩೮೫. | ಶ್ರೀ ಹೆಚ್.ಬಿ. ನಾಗರಾಜು<br>ಹೊಳೆನರಸೀಪುರ | ೧,೦೦೧ |
| ೨೩೮೬. | ಶ್ರೀ ಹೆಚ್. ಬಸವರಾಜಪ್ಪ<br>ಹೊಳೆನರಸೀಪುರ | ೨,೦೦೦ |
| ೨೩೮೭. | ಶ್ರೀ ಶಿವಮಂಗಳಸ್ವಾದಿ<br>ಮೈಸೂರು | ೨,೦೦೦ |
| ೨೩೮೮. | ಶ್ರೀ ಸಿದ್ಧಗಂಗಪ್ಪ<br>ಬೆಂಗಳೂರು | ೧೦೦೫ |
| ೨೩೮೯. | ಶ್ರೀ ಬಿ. ಚನ್ನಬಸವಯ್ಯ<br>ಅರೇಹಳ್ಳಿ | ೨,೦೦೦ |
| ೨೩೯೦. | ಶ್ರೀ ಎಂ.ಎಸ್. ಚಂದ್ರಶೇಖರ<br>ಚಿಕ್ಕನಾಯಕನಹಳ್ಳಿ | ೧,೦೦೦ |
| ೨೩೯೧. | ಶ್ರೀ ಜಿ.ಇ. ಮಲ್ಲೇಶಗೌಡ<br>ಗುಳಗಲೆ | ೧,೦೦೦ |
| ೨೩೯೨. | ಶ್ರೀ ಜಿ. ಕಿರಣ್‌ಕುಮಾರ್<br>ಬೆಂಗಳೂರು | ೧,೫೦೦ |
| ೨೩೯೩. | ಶ್ರೀ ಎ.ಪಿ. ನವೀನ್‌ಕುಮಾರ<br>ಅನಗಟ್ಟಿ | ೧,೦೧೦ |
| ೨೩೯೪. | ಶ್ರೀ ಬಿ.ಎಲ್. ಸಿದ್ಧಯ್ಯ<br>ತುಮಕೂರು | ೧೫,೦೦೦ |
| ೨೩೯೫. | ಶ್ರೀ ಚನ್ನಬಸವ ಬದ್ಧಿನ್ನಿ<br>ತೋರಣದಿನ್ನಿ | ೧,೦೦೦ |
| ೨೩೯೬. | ಶ್ರೀ ರವಿ ಪಾಟೀಲ್<br>ತೋರಣದಿನ್ನಿ | ೧,೦೦೦ |
| ೨೩೯೭. | ಶ್ರೀ ಯಲ್ಲಪ್ಪ<br>ಮಲ್ಲಾಪುರಾ | ೫೦೦ |
| ೨೩೯೮. | ಶ್ರೀ ದುರ್ಗಪ್ಪ<br>ಮಲ್ಲಾಪುರಾ | ೫೦೦ |
| ೨೩೯೯. | ಶ್ರೀ ಕಾಶೀನಾಥ<br>ಮಲ್ಲಾಪುರಾ | ೫೦೦ |
| ೨೪೦೦. | ಶ್ರೀ ವೀರೇಶ<br>ಮಲ್ಲಾಪುರಾ | ೫೦೦ |
| ೨೪೦೧. | ಶ್ರೀ ಈರಣ್ಣ<br>ಮಲ್ಲಾಪುರಾ | ೫೦೦ |
| ೨೪೦೨. | ಶ್ರೀ ಎನ್. ಮಂಜುನಾಥ<br>ಶ್ರೀಧರಗದ್ದೆ | ೨,೦೦೫ |
| ೨೪೦೩. | ಶ್ರೀ ಎಂ.ಎಸ್. ಲಕ್ಷ್ಮೀಶ<br>ಬೆಂಗಳೂರು | ೫೦೨ |
| ೨೪೦೪. | ಶ್ರೀ ಸಿದ್ಧಲಿಂಗಯ್ಯ<br>ಕೋರಾ | ೫೦೦ |
| ೨೪೦೫. | ಶ್ರೀ ಸಣ್ಣಭೀಮಣ್ಣ<br>ಹಿರಿಯೂರು | ೫೦೦ |
| ೨೪೦೬. | ಶ್ರೀ ಕೆ.ಜೆ. ಪೂರ್ಣಚಂದ್ರ<br>ಹಾಸನ | ೧,೧೧೧ |
| ೨೪೦೭. | ಶ್ರೀ ಎಂ.ಪಿ. ಕುಮಾರಸ್ವಾಮಿ<br>ಟಿ. ಮಾಯಗೊಂಡನಹಳ್ಳಿ | ೧,೦೦೧ |

(ಮುಂದುವರೆಯುತ್ತದೆ)

"Siddaganga" Monthly - Postal Reg. No. L2/RNP/385/TMR/2018-20
Posted at RMS, Tumkur-572 102

RNI No. 17139/69





# ಸಿದ್ಧಗಂಗಾ ಆಸ್ಪತ್ರೆ ಮತ್ತು ಸಂಶೋಧನಾ ಕೇಂದ್ರ

**ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮೀಜಿ ರಸ್ತೆ, (ಬಿ.ಹೆಚ್. ರಸ್ತೆ), ತುಮಕೂರು**

**Ph: 0816-6602222 | Emergency No. : 6602288 | 6602299**

**E: info@siddagangahospital.com**

## ವೈದ್ಯಕೀಯ ಸೌಲಭ್ಯಗಳು




### ಸೂಪರ್ ಸ್ಪೆಷಾಲಿಟಿ ಸೌಲಭ್ಯಗಳು

- ನ್ಯೂರಾಲಜಿ ಮತ್ತು ನ್ಯೂರೋಸರ್ಜರಿ
- ಕಾರ್ಡಿಯಾಲಜಿ ಮತ್ತು ಸಿ.ಟಿ.ವಿ.ಎಸ್
- ಮೆಡಿಕಲ್ ಮತ್ತು ಸರ್ಜಿಕಲ್ ಗ್ಯಾಸ್ಟ್ರೋಎಂಟರಾಲಜಿ
- ಮೆಡಿಕಲ್ ಮತ್ತು ಸರ್ಜಿಕಲ್ ಆಂಕೊಲಜಿ
- ನೆಫ್ರಾಲಜಿ ಮತ್ತು ಯುರಾಲಜಿ
- ಡಯಬಿಟಾಲಜಿ ಮತ್ತು ಎಂಡೋಕ್ರೈನಾಲಜಿ
- ಪಲ್ಮನಾಲಜಿ • ರುಮಟಾಲಜಿ
- ಪ್ಲಾಸ್ಟಿಕ್ ರಿಕನ್‌ಸ್ಟ್ರಕ್ಟೀವ್ ಮತ್ತು ಕಾಸ್ಮೆಟಿಕ್ ಸರ್ಜರಿ
- ಜೆರಿಯಾಟ್ರಿಕ್ ಮೆಡಿಸಿನ್

### ತುರ್ತು ಚಿಕಿತ್ಸಾ ಸೇವೆಗಳು

- ಅಪಘಾತ, ತುರ್ತು ಚಿಕಿತ್ಸೆ ಮತ್ತು ಕ್ರಿಟಿಕಲ್ ಕೇರ್
- ಎಮ್.ಐ.ಸಿ.ಯು., ಐ.ಸಿ.ಸಿ.ಯು., ನ್ಯೂರೋ ಐ.ಸಿ.ಯು., ಎಸ್.ಐ.ಸಿ.ಯು., ಎನ್.ಐ.ಸಿ.ಯು., ಪಿ.ಐ.ಸಿ.ಯು
- ಕ್ಯಾಥ್ ಲ್ಯಾಬ್ ಸೇವೆಗಳು
- ಡಯಾಲಿಸಿಸ್ ಸೇವೆಗಳು
- ಡಯಾಗ್ನೋಸ್ಟಿಕ್ ಸೇವೆಗಳು
- ಇಂಟರ್‌ವೆನ್ಷನಲ್ ರೇಡಿಯಾಲಜಿ
- ಸಿ ಟಿ ಸ್ಕ್ಯಾನ್ – 16 ಸ್ಲೈಸ್
- ರಕ್ತ ನಿಧಿ ಮತ್ತು ಕಾಂಪೊನೆಂಟ್ಸ್
- ಆಂಬ್ಯುಲೆನ್ಸ್ ಸೇವೆಗಳು • ಔಷಧಾಲಯ

### ಇತರೆ ಸೌಲಭ್ಯಗಳು

- ಇಂಟರ್ನಲ್ ಮೆಡಿಸಿನ್
- ಮನೋವೈದ್ಯಕೀಯ ಸೇವೆಗಳು
- ಜನರಲ್ ಮತ್ತು ಲ್ಯಾಪರೊಸ್ಕೋಪಿಕ್ ಸರ್ಜರಿ
- ಬೆರಿಯಾಟ್ರಿಕ್ ಮತ್ತು ಮೆಟಾಬ್ಯಾಲಿಕ್ ಸರ್ಜರಿ
- ಆರ್ಥೋಪೆಡಿಕ್ ಮತ್ತು ತುರ್ತು ಅಪಘಾತ ಚಿಕಿತ್ಸೆ
- ಎಂಡೋಸ್ಕೋಪಿ, ಕೊಲೊನೋಸ್ಕೋಪಿ ಮತ್ತು ಇ.ಆರ್.ಸಿ.ಪಿ
- ನಿಯೋನೇಟಾಲಜಿ, ಪೀಡಿಯಾಟ್ರಿಕ್ಸ್ ಮತ್ತು ಪೀಡಿಯಾಟ್ರಿಕ್ ಸರ್ಜರಿ
- ಪ್ರಸೂತಿ ಮತ್ತು ಸ್ತ್ರೀ ರೋಗ ಚಿಕಿತ್ಸೆ
- ಫೀಟಲ್ ಮೆಡಿಸಿನ್ • ಐ.ವಿ.ಎಫ್ ಕೇಂದ್ರ • ಇ.ಎನ್.ಟಿ.
- ನೇತ್ರ ಚಿಕಿತ್ಸೆ • ಡರ್ಮಟಾಲಜಿ
- ದಂತ ಚಿಕಿತ್ಸೆ ಮತ್ತು ಮ್ಯಾಕ್ಸಿಲೋಫೇಶಿಯಲ್ ಸರ್ಜರಿ
- ಮಿನಿಮಲಿ ಇನ್‌ವೇಸಿವ್ ಸರ್ಜರಿ ಮತ್ತು ಫಂಡೋಪ್ಲಿಕೇಷನ್

To

If undelivered please return to :
Editor
Siddaganga Monthly Magazine
Siddaganga Math
Tumkur-572 104